

# ಸಿದ್ಧಗಂಗಾ



ಫೆಬ್ರವರಿ ೨೦೦೨




ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಮಹೋತ್ಸವದ ಉದ್ಘಾಟನೆ. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು, ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ, ಲೋಕಸಭಾ ಸದಸ್ಯ ಹಾಗೂ ಚಿತ್ರನಟ ಶ್ರೀ ಅಂಬರೀಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಪೂಜ್ಯ ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳವರಿಗೆ



'ಕೋಮು ಸೌಹಾರ್ದ' ರಾಷ್ಟ್ರೀಯ ಪ್ರಶಸ್ತಿ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಅನುಗ್ರಹ ನುಡಿ



ಡಾ. ಯು.ಆರ್. ಅನಂತಮೂರ್ತಿಯವರಿಗೆ ಶ್ರೀ ಶ್ರೀಗಳವರಿಂದ ಆಶೀರ್ವಾದ



ಮುಖಪುಟ
ಪೂಜ್ಯ ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳವರಿಗೆ 'ಕೋಮು ಸೌಹಾರ್ದ' ರಾಷ್ಟ್ರೀಯ ಪ್ರಶಸ್ತಿ. ಗ್ರಾಮಾಂತರ ಬಸವಜಯಂತಿ ವಾರ್ಷಿಕ ಸಮಾರೋಪದಲ್ಲಿ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ಶ್ರೀ ಮಠಕ್ಕೆ ಡಾ. ಯು.ಆರ್. ಅನಂತಮೂರ್ತಿ ಅವರ ಭೇಟಿ.



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೮ | ಫೆಬ್ರವರಿ ೨೦೦೨ | ಸಂಚಿಕೆ : ೨


ಒಳಪುಟಗಳಲ್ಲಿ.........




ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ– ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ವಿಳಾಸ :
''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪


ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೫೦೦/– |
| ಬಿಡಿ ಪ್ರತಿ | ರೂ. ೧೦.೦೦ |



## ಅಖಿಲ ಭಾರತ ಸಾಹಿತ್ಯ ಸಮ್ಮೇಳನ .......

ದಿನಾಂಕ ೧೫, ೧೬, ೧೭ರ ಫೆಬ್ರವರಿ ೨೦೦೨ರಂದು ತುಮಕೂರಿನಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ. ಕನ್ನಡಿಗರ ಹೆಮ್ಮೆಯ ಸಮ್ಮೇಳನ, ೭೧ನೆಯ ಸಮ್ಮೇಳನ. ಹಿಂದೊಮ್ಮೆ ೧೯೬೩ರಲ್ಲಿ ಶ್ರೀ ಸಿದ್ಧಗಂಗಾ ಮಠದಲ್ಲಿ ಸಮ್ಮೇಳನ ನಡೆದಿತ್ತು. ಪರಮ ಪೂಜ್ಯ ಡಾ ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ನೇತೃತ್ವದಲ್ಲಿ ಅಚ್ಚುಕಟ್ಟಾಗಿ ಎಲ್ಲರ ಪ್ರೀತಿ ಪ್ರಶಂಸೆಗಳಿಗೊಳಗಾಗಿ ನಡೆದಿದ್ದು ಇಂದಿಗೂ ಸ್ಮರಣೀಯ. ಅಂದು ಸಮ್ಮೇಳನಾಧ್ಯಕ್ಷರಾಗಿದ್ದ ಡಾ ॥ ರಂ. ಶ್ರೀ ಮುಗಳಿಯವರು ಮನದುಂಬಿ ತಮ್ಮ ಸದ್ಭಾವನೆಯನ್ನು ಪ್ರಕಟಗೊಳಿಸಿದ್ದರು. ಇದೀಗ ತುಮಕೂರಿನಲ್ಲಿ ಮೂವತ್ತೆಂಟು ವರ್ಷಗಳ ನಂತರ ಸಮ್ಮೇಳನ.

ಡಾ ॥ ಯು.ಆರ್. ಅನಂತಮೂರ್ತಿಯವರು ೭೧ನೇ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ''ಮುಖ್ಯಪ್ರವಾಹದಲ್ಲಿ ಎಷ್ಟು ದೊಡ್ಡವರೆಲ್ಲ ಪರಿಷತ್ತನ್ನು, ಕನ್ನಡವನ್ನು ಕಟ್ಟಿರುವಾಗ ಈ ಸಾಲಿನಲ್ಲಿ ನನಗೊಂದು ಅವಕಾಶ'' ಎಂಬ ವಿನಯದ ನುಡಿಗಳನ್ನಾಡಿದ್ದಾರೆ. ಉಡುಪಿ ರಾಜಗೋಪಾಲಚಾರ್ಯ ಅನಂತಮೂರ್ತಿಯವರು ಶಿವಮೊಗ್ಗ ಜಿಲ್ಲೆಯವರು. ಮೇಳಿಗೆ ಎಂಬ ಗ್ರಾಮದಲ್ಲಿ ೧೯೩೨ರಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದಿಂದ ಇಂಗ್ಲೀಷ್ ಸಾಹಿತ್ಯದಲ್ಲಿ ಎಂ.ಎ. ಪದವಿ ಪಡೆದವರು. ಇಂಗ್ಲೆಂಡಿನ ಬರ್ಮಿಂಗ್ ಹ್ಯಾಂ ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಪದವಿ ಗಳಿಸಿದರು. ಇಂಗ್ಲೀಷ್ ಉಪನ್ಯಾಸಕರಾಗಿ ಹಾಸನದ ಸರ್ಕಾರಿ ಕಾಲೇಜಿನಲ್ಲಿ ವೃತ್ತಿಜೀವನವನ್ನಾರಂಭಿಸಿ, ಮೈಸೂರಿನ ಮಹಾರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ದೆಹಲಿಯ ಜವಹರಲಾಲ್ ನೆಹರು ವಿಶ್ವವಿದ್ಯಾಲಯ, ಅಮೆರಿಕೆಯ ಅಯೋವಾ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪರಾಗಿ, ಕೊಟ್ಟಾಯಂನ ಮಹಾತ್ಮಾಗಾಂಧಿ ವಿಶ್ವವಿದ್ಯಾಲಯದ ಕುಲಪತಿಯಾಗಿ, ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಸೇವಾಪಥದಲ್ಲಿ ನಡೆದು ಬಂದವರು.

ಸಮಾಜವಾದಿಗಳಾದ ರಾಮಮನೋಹರ ಲೋಹಿಯ, ಶಾಂತವೀರ ಗೋಪಾಲಗೌಡರ ಬಳಗದವರಾಗಿ ಗಾಂಧೀವಾದ ಮತ್ತು ಮಾರ್ಕ್ಸ್‌ವಾದಗಳಿಂದ ಪ್ರಭಾವಿತರಾಗಿ ಗಟ್ಟಿಗೊಂಡ ಅನಂತಮೂರ್ತಿಯವರು ''ಸಂಸ್ಕಾರ, ಎಂದೆಂದೂ ಮುಗಿಯದ ಕಥೆ, ಪ್ರಶ್ನೆ, ಆಕಾಶ ಮತ್ತು ಬೆಕ್ಕು, ಮೌನಿ, ತಾಯಿ, ಭಾರತೀಪುರ, ಅವಸ್ಥೆ, ಭವ್ಯದಿವ್ಯ ಬಾವಲಿ, ಅಜ್ಜನ ಹೆಗಲ ಸುಕ್ಕುಗಳು, ಸಮಕ್ಷಮ,'' ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಧೀಮಂತರು. ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು, ಪದ್ಮಭೂಷಣರು. ರಾಜ್ಯ, ಕೇಂದ್ರ ಸಾಹಿತ್ಯ ಅಕಾಡೆಮಿಗಳ ಪ್ರಶಸ್ತಿ ಮಾನ್ಯರು.

ಕನ್ನಡ ಸಾರಸ್ವತ ಲೋಕದ ಎತ್ತರದ ದೀಪವಾಗಿ, ವಿನಯ ಸೌಜನ್ಯಗಳ ಮುಕ್ತ ಚಿಂತಕರೆನಿಸಿ, ಸಂಪ್ರದಾಯ ಒಡಲಿಂದೆದ್ದು ಬಂದ ವಿಚಾರ ಧೀಮಂತರಾಗಿ, ಸ್ನೇಹಪರರಾಗಿರುವ ಡಾ. ಯು.ಆರ್. ಅನಂತಮೂರ್ತಿಯವರದು ವಿಶಿಷ್ಟ ವ್ಯಕ್ತಿತ್ವ. ತುಮಕೂರಿನಲ್ಲಿ ನಡೆದಿರುವ ಅಖಿಲ ಭಾರತ ೭೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡಿರುವ ಶ್ರೀಯುತರನ್ನು 'ಸಿದ್ಧಗಂಗಾ' ಅಭಿನಂದಿಸಲು ಹರ್ಷಿಸುತ್ತದೆ.

ಸಮ್ಮೇಳನ ಅವಿಸ್ಮರಣೀಯವಾಗುವಂತೆ ಮಾಡುವ ಜವಾಬ್ದಾರಿ ಕೇವಲ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳಿಗೆ ಮಾತ್ರ ಸೀಮಿತವಾಗಬಾರದು. ತುಮಕೂರಿನ ಹಾಗೂ ಜಿಲ್ಲೆಯ ಸಾಹಿತಿಗಳ, ಸಾಹಿತ್ಯಾಭಿಮಾನಿಗಳ, ನಾಗರಿಕರ ಕರ್ತವ್ಯವೆಂದೇ ಭಾವಿಸಿ, ಸಾಹಿತ್ಯ ಸಮ್ಮೇಳನಕ್ಕೆ ಹೊರ ಊರುಗಳಿಂದ ಬಂದ ಎಲ್ಲರನ್ನು ಆತ್ಮೀಯವಾಗಿ ಸತ್ಕರಿಸುವ ಜವಾಬ್ದಾರಿಯನ್ನು ನಿರ್ವಹಿಸುವ ಸಂಕಲ್ಪಮಾಡಬೇಕು. ತುಮಕೂರು ಸುಜನಸಂಪದ ಜಿಲ್ಲೆ ಎಂಬುದನ್ನು ಸಾರ್ಥಕಗೊಳಿಸಬೇಕು. ಮೂರು ದಿನಗಳು ನೂರುವರ್ಷ ನೆನಪಿನಲ್ಲಿ ಉಳಿಯುವಂತಾಗಬೇಕು. ಅದಕ್ಕಾಗಿ ಎಲ್ಲರೂ ಶ್ರಮಿಸೋಣ; ಪ್ರೀತಿಯಿಂದ ಶ್ರಮಿಸೋಣ ಎನ್ನುತ್ತದೆ ''ಸಿದ್ಧಗಂಗಾ''.

– ಸಂಪಾದಕ







## ಸ್ಮರಣೀಯರು

ದೆಹಲಿ ರಾಷ್ಟ್ರದ ರಾಜಧಾನಿ. ಸಂಸತ್‌ಭವನ ಪ್ರಜಾಪ್ರಭುತ್ವದ ದೇಗುಲ. ಆದರ ಮೇಲೆ ದುಷ್ಕರ್ಮಿಗಳ ಧಾಳಿ. ಅನೂಹ್ಯ ಭಯೋತ್ಪಾದನೆಯ ಪ್ರಸಂಗ. ಸಂಸತ್ತಿನ ಒಳಗೆ ಅಧಿವೇಶನ. ದೇಶದ ಕೋಟಿ ಕೋಟಿ ಪ್ರಜೆಗಳನ್ನು ಪ್ರತಿನಿಧಿಸುವ ಚುನಾಯಿತ ಪ್ರತಿನಿಧಿಗಳು. ಮುತ್ಸದ್ದಿಗಳ ರಾಷ್ಟ್ರ ಚಿಂತನೆ. ಪ್ರಜಾಪೂಜೆಯ ಕೈಂಕರ್ಯವಿಧಿ. ಇದ್ದಕ್ಕಿದ್ದಂತೆ ಸದನದ ಒಳಗೆ ನುಗ್ಗಲು ಉಗ್ರಗಾಮಿಗಳ ವಿಫಲ ಪ್ರಯತ್ನ. ಭದ್ರತಾಪಡೆಯ ವೀರರ ಅತ್ಯದ್ಭುತ ಸಾಹಸ ಪ್ರದರ್ಶನ. ಭಯೋತ್ಪಾದಕರನ್ನು ಬಗ್ಗುಬಡಿಯುವಲ್ಲಿ ಕೆಲವರ ಬಲಿದಾನ. ದೇಶಕ್ಕಾಗಿ ಪ್ರಾಣಾರ್ಪಣೆ. ನಿಜವಾದ ದೇಶಭಕ್ತರು, ಪ್ರಾಣಕ್ಕಿಂತ ದೇಶದೊಡ್ಡದು ಎಂಬ ಪವಿತ್ರಭಾವನೆ. ಜನನಾಯಕರನ್ನು, ಸಂಸದರನ್ನು ಕಾಪಾಡಿದ ಸ್ಮರಣೀಯರು.

ಈ ಘಟನೆ ನಮಗೆ ಏನನ್ನು ತಿಳಿಸುತ್ತದೆ? ದೇಶ ಸೇವೆಯೇ? ಈಶ ಸೇವೆ ಎಂಬುದನ್ನಲ್ಲವೇ? ಕೇವಲ ಮಾತುಗಳು, ಭಾಷಣಗಳು ದೇಶಭಕ್ತಿಯಾಗಲಾರವು ಎಂಬುದನ್ನಲ್ಲವೆ. ದೇಶಾಡಳಿತ ಸೂತ್ರವನ್ನು ಕೈಹಿಡಿದಿರುವವರನ್ನು ರಕ್ಷಿಸುವುದೂ ಸಹ ದೇಶಭಕ್ತಿತಾನೆ? ಒಂದು ಕ್ಷಣ ಆ ದುರ್ಘಟನೆಯಲ್ಲಿ ಭದ್ರತಾ ಪಡೆಯವರು ಅಜಾಗರೂಕರಾಗಿ, ಆಲಸ್ಯಮನಸ್ಕರಾಗಿ, ಅನ್ಯಚಿತ್ತರಾಗಿ, ಕರ್ತವ್ಯಚ್ಯುತರಾಗಿದ್ದರೆ ಏನಾಗಿ ಹೋಗಿಬಿಡುತ್ತಿತ್ತು. ಆಂತಕದ ಕ್ಷಣಗಳವು. ಆಪತ್ತನ್ನು ಹೊತ್ತು ತಂದಿದ್ದವು. ಆದರೆ ಕರ್ತವ್ಯವೇ ದೇವರಾಯಿತು ಆಗ. ಭದ್ರತಾಪಡೆಯ ಬಂಧುಗಳ ವಿರೋಚಿತ ಹೋರಾಟದ ಸಂಸತ್ತಿನ ದೇಗುಲದ ಒಳಗಿದ್ದವರು ಉಳಿದರು. ತಮ್ಮ ಪ್ರಾಣಕೊಟ್ಟು ಜನತಾಪ್ರತಿನಿಧಿಗಳನ್ನು ಉಳಿಸಿದರು ಭದ್ರತಾ ಪಡೆಯ ಪುಣ್ಯಾತ್ಮರು.

ಮನುಷ್ಯ ಮನುಷ್ಯನಾಗಿ ಬದುಕುವ ಕಲೆಯನ್ನು ಪ್ರಪಂಚ ಇನ್ನೂ ಕಲಿತಿಲ್ಲವೆಂದಂತಾಯಿತಲ್ಲವೆ? ಅಮೆರಿಕದ ಮೇಲಾದ ಭಯೋತ್ಪಾದನೆಯೂ ಇದನ್ನೇ ಸಾಬೀತು ಮಾಡಿದ ಬೆನ್ನಲ್ಲೇ ದೆಹಲಿಯ ದುರಂತ. ತುತ್ತು ಅನ್ನಕ್ಕಾಗಿ ಕೋಟಿ ಕೋಟಿ ಜೀವಗಳು ತಹತಹಿಸುತ್ತಿರುವಾಗ ಹಿಂಸೆ, ಧ್ವಂಸಗಳ ತಾಂಡವದ ಅಗತ್ಯ ಎಲ್ಲಿದೆ? ಇಂಥ ಸಂದರ್ಭದಲ್ಲಿ ಬಾಂಬುಗಳ ನಿರ್ಮಾಣ ಮುಂದುವರಿಯಬೇಕೆ? ಜೀವಸಂರಕ್ಷಿಸುವ ಮಾರ್ಗದತ್ತ ಮನುಷ್ಯಮತಿ ದುಡಿಯಬೇಕಲ್ಲವೆ? ಚಿಂತನೆಯ ದಾರಿ ಬದಲಾಗಬೇಕು ತಾನೆ? ಹಿಂಸೆಯ ಹಾದಿಯಲ್ಲಿ ಹರಿದ ರಕ್ತನದಿಗಳೆಷ್ಟು? ಬಿದ್ದ ಹೆಣಗಳೆಷ್ಟು? ಸುಟ್ಟು ಸೀದು ಹೋದ ಪವಿತ್ರಭಾವನೆಗಳೆಷ್ಟು? ಎಂದು ಆಲೋಚಿಸುವ ಮನುಷ್ಯ ಪ್ರಜ್ಞೆ ಅರಳಬೇಡವೆ? ಆ ಪ್ರಜ್ಞೆಯ ಅಭಾವದಿಂದ ಇಂದಿನ ಎಲ್ಲ ದುರಂತಗಳು. ಇದೆಲ್ಲದಕ್ಕೆ ಪರಿಹಾರವೆಂದರೆ ಪ್ರೀತಿ; ಜೀವನಪ್ರೀತಿ. ಪ್ರೀತಿ ದಯಾಮೂಲವಾದುದು. ಅದೇ ಅದರ ಜೀವಧಾತು. ಪ್ರೀತಿಯ ಮತ್ತೊಂದು ಮುಖವೇ ಧರ್ಮ. ಧರ್ಮವೆಂದರೆ ಒಳ-ಹೊರಗು ಪರಿಶುದ್ಧ ಪಾರದರ್ಶಕ ಜೀವನ ಮಾರ್ಗ. ''ಅಂತರಂಗ-ಬಹಿರಂಗ'' ಶುದ್ಧಿ. ಜೀವನವನ್ನು, ಲೋಕ ಜೀವನವನ್ನು ನಿರಾಕರಿಸಿದ ರೀತಿಯಲ್ಲಿ, ಉದಾತ್ತ ದೃಷ್ಟಿಯಿಂದ ಅನುಭವಿಸುವುದೇ ಧರ್ಮರಹಸ್ಯ. ಹೊನ್ನು, ಹೆಣ್ಣು, ಮಣ್ಣನ್ನು ಗಳಿಸುವಮಾರ್ಗ ಪವಿತ್ರವಾಗಿರಬೇಕು.

ಮನೆ ಒಳಗೂ-ಹೊರಗೂ ಸ್ವಚ್ಛವಾಗಿದ್ದಾಗ ಆರೋಗ್ಯ. ಅದು ಬಿಟ್ಟು 'ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ'ದ್ದರೆ ಅಲ್ಲಿ ವಾಸಿಸುವದಾದರೂ ಹೇಗೆ? ಅಂತೆಯೇ ಮನದ ವಿಚಾರವಾದರೂ ಕೂಡ. ಮನ ಹೀನ ವಿಷಯಗಳತ್ತ ಹರಿಯಬಾರದು. 'ತನ್ನಂತೆ ಪರರು' ಎಂದು ಭಾವಿಸಬೇಕು. ಧರ್ಮವೆಂದರೆ ಅದೇನೇ. ತಾನು ಸುಖಸಂತೋಷದಿಂದ ಇರಬೇಕು, ಬಾಳಬೇಕು ಎಂದು ಆಶಿಸುವಾಗ, ಇತರರೂ ಹಾಗೆ ಬದುಕಲು ಸಹಕರಿಸುವುದೇ ಧರ್ಮ, ಪ್ರೀತಿ ಅದರ ಜೀವಾಳ. ಹಾಗಾದಾಗ ಯುದ್ಧದ ಮಾತು ಬರಲಾರದು. ಸ್ವಾರ್ಥ ಶಿವವನ್ನು ತಂದುಕೊಡಲಾರದು. ಬದಲಾಗಿ ಪರಹಿತದಲ್ಲಿ ಪುಣ್ಯವಿದೆ ಎಂದರಿತಾಗ ಎಲ್ಲವೂ ಮಂಗಳಮಯವಾದೀತು !

(೨೦-೧೨-೨೦೦೧ರಂದು ನೆಲಮಂಗಲದ ಸಮಾರಂಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಪಂಚವಿಂಶತಿ ತತ್ವಾಶ್ರಯವೆಂಬ ಪಟ್ಟಣದೊಳಗೆ*
*ಆರುಬಣ್ಣದ ಪಕ್ಷಿ ಮೂರುಗೂಡ ಮಾಡಿಕೊಂಡು*
*ನಾಲ್ಕರಾಹಾರವ ಕೊಂಬುದ ಕೊಂಡೆನಯ್ಯಾ !*
*ಐದರ ನೀರಕುಡಿದು ಪರಿಣಾಮಿಸುತ್ತಿದೆ ನೋಡಾ*
*ಏಳು ಮಾಲೆಯನುಂಡು ಎಂಟರಾಭರಣವ ತೊಟ್ಟಿದೆ ನೋಡಾ,*
*ಹತ್ತರ ಬೆಂಬಳಿವಿಡಿದು ಒಂಬತ್ತು ಬಾಗಿಲೊಳಗೆ ನಡೆದಾಡುವುದ ಕಂಡೆನಯ್ಯಾ*
*ಕೊಂಬು ಕೊಂಬಿನ ಇಂಬಿನಲ್ಲಿ ಸುಳಿದಾಡುತ್ತಿದೆ ನೋಡಾ ಅಯ್ಯಾ*
*ಆ ಸುಳುಹಿನ ಸೂಕ್ಷ್ಮವ ತಿಳಿದು*
*ತನ್ನ ಸುಳುಹನರಿವ ಹಿರಿಯನಾರನು ಕಾಣೆನಯ್ಯ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.*

ಇಪ್ಪತ್ತೈದು' ತತ್ವಗಳಿಂದಾಗಿರುವ ದೇಹವೇ ಪಟ್ಟಣ. ಅದರೊಳಗಿರುವ ಜೀವವೇ ಆರು ಬಣ್ಣದ ಪಕ್ಷಿ, ಅದು ಮೂರು ತನುವೆಂಬ ಗಿಡದ ಮೇಲೆ ಕುಳಿತು, ಮನ ಬುದ್ಧಿ ಚಿತ್ತ ಅಹಂಕಾರಗಳೆಂಬ ಚತುರ್‌ಕರಣಗಳ ಮುಖದಲ್ಲಿ ವಿಷಯ ಪದಾರ್ಥವನ್ನು ಅನುಭವಿಸುವುದನ್ನು ಸುಜ್ಞಾನೋದಯವಾದ ಶರಣನು ಜ್ಞಾನನೇತ್ರದಿಂದ ನೋಡುತ್ತಿದ್ದಾನೆ. ಪಂಚೇಂದ್ರಿಯಗಳ ವಿಷಯವೆಂಬ ನೀರು ಕುಡಿದು ಪರಿಣಮಿಸುತ್ತಿದೆ ಆ ಪಕ್ಷಿ. ಅಲ್ಲದೆ ಸಪ್ತವ್ಯಸನಗಳ ವ್ಯಾಪಾರದಲ್ಲಿ ನಿರತವಾಗಿ ಎಟು ಮದಗಳೆಂಬ ಆಭರಣವನ್ನಿಟ್ಟುಕೊಂಡು ದಶವಾಯುಗಳ ಪ್ರಪಂಚದ ಬೆನ್ನಟ್ಟಿ ಈಡಾದಿನವನಾಡಿಗಳಲ್ಲಿ ವ್ಯವಹರಿಸುತ್ತ ಅಹಂಕಾರ ಮಮಕಾರವೆಂಬ ಕೊಂಬೆಗಳಡಿಯಲ್ಲಿ ವರ್ತಿಸುತ್ತಿದೆ. ಹಾಗೆ ವರ್ತಿಸುತ್ತಿರುವ ಜೀವನ ಜೀವಭಾವವನ್ನು ಸದ್ವಿವೇಕದಿಂದ ವಿಚಾರಿಸಿ ನೋಡಿ ಸುಜ್ಞಾನಿಯಾದ ಶರಣನಿಗೆ ಇದು ಯೋಗ್ಯವಲ್ಲವೆಂದು ತಿರಸ್ಕರಿಸುವ ಜ್ಞಾನಿಗಳು ಅಪೂರ್ವ.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ -
ಶ್ರೀತೋಂ.ಸಿ.ಕೈಂ.ಸೇ.ಸಂಘ, ಎಡೆಯೂರು–ಗದಗ)

### ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಕಾಯ ಭ್ರಮೆಯಳಿದಿರುವ ಜೀವಭ್ರಮೆ ಮುರಿದಿರುವ
ಆತ್ಮರಾಮನೊಳು ವಿರಮಿಸಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಿನ್ನಪವನವಧಾರು ಬಿಲ್ವ ಬೆಲ್ಲದ ತರುವೆ
ಸೊಲ್ಲು ಫಲವಾಗಿ ನುಡಿಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾಮಸೀಮೆಯನಳಿದ ಜಾತಿ ವರ್ಣವ ಕಳೆದ
ಜಗಭರಿತ ಜಂಗಮ ಲಿಂಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ಭಯನೆ ಅಕ್ಷಯನೆ ಓಂಕಾರ ರೂಪನೆ
ಊರ್ಧ್ವಮುಖ ನಿರ್ಮಾಯಗಣಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಣದ ನಗುವನು ಕಂಡ ಹಣದ ಅಳುವನು ಕಂಡ
ಪ್ರಾಣ ಗಂಭೀರವನು ಕಂಡುಂಡ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ನೆಲದ ಬೊಂಬೆಯಮಾಡಿ ಜಲ ಬಣ್ಣವನುಡಿಸಿ
ಉಲಿವ ಗೆಜ್ಜೆಯ ಕಟ್ಟಿ'' ಆಡಿಸುತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ತನುವತೋಟವಗೈದೆ ಮನವ ಗುದ್ದಲಿಗೈದೆ
ಬಗಿದು ಬಿತ್ತಿದೆ ಬ್ರಹ್ಮಬೀಜವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿಗಸಾಧ್ಯನೆ ಭಾವಕಗಮ್ಯನೆ
ಭಕುತಿಗೊಲಿಯುವ ಸುಗುಣನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಕಾಣಬಾರದ ಕಾಯ ನೋಡಬಾರದ ತೇಜ
ಉಪಮಿಸಬಾರದ'' ಶಿವಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿನ ಪರಿಮಳವೆ ಅರಿಯಬಾರದ ಬೆಡಗೆ
ಅರುಹು ಕುರುಹಿನ ಒಳಗರಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- **ಹೆಚ್.ವಿ. ವೀರಭದ್ರಯ್ಯ**





॥ ಓಂ ಶ್ರೀ ಗುರುಲಿಂಗಾಯ ನಮಃ ॥



ಅವಾಜ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ಸಮಸ್ತಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ, ಮಹೋತ್ಸವಾಹ್ವಾನ ಪತ್ರಿಕೆ

ಶ್ರೀ ಶಿವಕುಮಾರ ಸ್ವಾಮಿಗಳು, ಶ್ರೀ ಸಿದ್ಧಗಂಗಾಮಠಾಧ್ಯಕ್ಷರು

ಶ್ರೀ .......................................................................................

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೯೨೩ನೇ ವಿಷುನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ | ಷಷ್ಠಿ | ಸೋಮವಾರ | ೪-೩-೨೦೦೨ | ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿಯ ಉತ್ಸವ ಮತ್ತು ಶ್ರೀ ಸಿದ್ಧಗಂಗಾ ಮಾತೆಯ ಕಳಸ ಮಹೋತ್ಸವ ವೃಷಭ ವಾಹನ |
| – '' – | ಸಪ್ತಮಿ | ಮಂಗಳವಾರ | ೫-೩-೨೦೦೨ | ಗಜ ವಾಹನ ಮತ್ತು ರಾವಣ ವಾಹನ |
| – '' – | ಅಷ್ಟಮಿ | ಬುಧವಾರ | ೬-೩-೨೦೦೨ | ನಂದಿ ವಾಹನ ಮತ್ತು ಸಿಂಹ ವಾಹನ |
| – '' – | ನವಮಿ | ಗುರುವಾರ | ೭-೩-೨೦೦೨ | ಹುಲಿ ವಾಹನ ಮತ್ತು ಶೇಷ ವಾಹನ |
| – '' – | ದಶಮಿ | ಶುಕ್ರವಾರ | ೮-೩-೨೦೦೨ | ಅಶ್ವವಾಹನ ಮತ್ತು ನವರಂಗಪಾಲಕಿ ಉತ್ಸವ |
| – '' – | ಏಕಾದಶಿ | ಶನಿವಾರ | ೯-೩-೨೦೦೨ | ಹುತ್ತದ ವಾಹನ |
| – '' – | ದ್ವಾದಶಿ | ಭಾನುವಾರ | ೧೦-೩-೨೦೦೨ | ನವಿಲು ವಾಹನ |
| – '' – | ತ್ರಯೋದಶಿ | ಸೋಮವಾರ | ೧೧-೩-೨೦೦೨ | ಬಿಲ್ವವೃಕ್ಷ ವಾಹನ |
| – '' – | ಚತುರ್ದಶಿ | ಮಂಗಳವಾರ | ೧೨-೩-೨೦೦೨ | ಮಹಾಶಿವರಾತ್ರಿ, ಪೂಜಾದಿಗಳು ಮತ್ತು ಮುತ್ತಿನ ಪಾಲಕಿ ಉತ್ಸವ |
| – '' – | ಅಮಾವಾಸ್ಯೆ | ಬುಧವಾರ | ೧೩-೩-೨೦೦೨ | **ರಥೋತ್ಸವ ಮತ್ತು ರುದ್ರಾಕ್ಷಿ ಮಂಟಪೋತ್ಸವ** |
| | | ಗುರುವಾರ | ೧೪-೩-೨೦೦೨ | **ಬೆಳ್ಳಿಪಾಲಕಿ ಉತ್ಸವ** |
| ಫಾಲ್ಗುಣ ಶುದ್ಧ | ಪಾಡ್ಯ | ಶುಕ್ರವಾರ | ೧೫-೩-೨೦೦೨ | ಶಿವಾನುಭವ ಸಮ್ಮೇಳನ, ತೆಪ್ಪೋತ್ಸವ ಮತ್ತು ಪಂಚ ಬ್ರಹ್ಮೋತ್ಸವ |

ಮಾಮೂಲಿನಂತೆ **''ಎತ್ತಿನ ಪರಿಷೆ''** ಮತ್ತು **''ದನಗಳ ಪ್ರದರ್ಶನ''** ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆಯೂ ನಡೆಯುವಂತೆ ಏರ್ಪಡಿಸಿದೆ. **''ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದಲ್ಲಿ''** ಪ್ರತಿದಿನವೂ ಸಾಯಂಕಾಲ **''ಸಾಂಸ್ಕೃತಿಕ ಚಟುವಟಿಕೆಗಳೂ''** ನಡೆಯುವಂತೆ ಏರ್ಪಾಡು ಮಾಡಲಾಗಿದೆ. ಸರ್ವರೂ ಸಕಾಲದಲ್ಲಿ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

**ಶ್ರೀ ಸಿದ್ಧಗಂಗಾ ಮಠ**
ತುಮಕೂರು ಜಿಲ್ಲೆ.

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**
ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು

# ಸಿದ್ಧರಾಮನ ಸಂದೇಶ

ಹಿಂದಿನ ಸಂಚಿಕೆಯಿಂದ

ಲಿಂ. ಡಾ. ಎಚ್. ತಿಪ್ಪೇರುದ್ರಸ್ವಾಮಿ
ಪ್ರಸಿದ್ಧ ಸಾಹಿತಿಗಳು

*ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ*
*ಮತ್ತಾರ ಹಿತಕ್ಕಲ್ಲ ನೋಡಯ್ಯ*
*ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ*
*ಮತ್ತಾರ ಹಿತಕ್ಕಲ್ಲ ನೋಡಯ್ಯಾ*
*ತನ್ನ ಬಿಟ್ಟನ್ಯಹಿತವ ನೋಡಿದಡೆ ಕೂಡಿಕೊಂಬ*
*ನಮ್ಮ ಕಪಿಲಸಿದ್ಧಮಲ್ಲಯ್ಯನವರ.*

ಎಂದು ತನ್ನ ಒಂದು ವಚನದಲ್ಲಿ ಹೇಳಿದ್ದಾನೆ. 'ತನ್ನಬಿಟ್ಟನ್ಯಹಿತವ' ನೋಡ ಬೇಕೆಂಬ ಮಾತಿನಲ್ಲಿ ನಿಸ್ವಾರ್ಥ ಕರ್ಮದ ಮರ್ಮವನ್ನು ಸೂಚಿಸಿದ್ದಾನೆ. ಸಂಕುಚಿತವಾದ ಅಹಂಕಾರ ಮೂಲದಿಂದ ಅಲ್ಪ ಲೌಕಿಕ ತೃಪ್ತಿಗಾಗಿ ಮಾಡಿದ ಕರ್ಮಗಳು ಬಂಧಕವಾಗುತ್ತವೆ. ಆದರೆ ಸಮಷ್ಟಿ ಹಿತದಿಂದ ಪ್ರೇರಿತವಾದ ನಿಸ್ವಾರ್ಥ ಕರ್ಮ ಗಳು ಬಂಧಕವಾಗುತ್ತವೆ. ಆದರೆ ಸಮಷ್ಟಿ ಹಿತದಿಂದ ಪ್ರೇರಿತವಾದ ನಿಸ್ವಾರ್ಥ ಕರ್ಮಗಳು ಬಂಧಕವಾಗುವುದಿಲ್ಲ ತಾರಕವಾಗುತ್ತವೆ. ಇಂತಹ ಕರ್ಮಗಳನ್ನೇ 'ನಿರ್ಮಲ ಕರ್ಮ' ಗಳೆಂದು ಕರೆಯುತ್ತಾನೆ.

*ನಿರ್ಮಲ ಕರ್ಮವದು ಸದ್ಗತಿ ಸಾಧನ ನೋಡಾ*
*ನಿರ್ಮಲ ಕರ್ಮವದು ಜ್ಞಾನಕ್ಕೆ ವರ್ಧನ ನೋಡಾ*
*ನಿರ್ಮಲ ಕರ್ಮವದು ಕಪಿಲಸಿದ್ಧಮಲ್ಲಿಕಾರ್ಜುನ*
*ಕೂಡುವ ಕೂಟ ನೋಡಾ.*

ಎಂದು ಕರ್ಮಮಾರ್ಗದ ಮೂಲಕವೇ ಮಲ್ಲಿಕಾರ್ಜುನನ್ನು ಕೂಡುವ ಮಾಟವನ್ನು ರೂಢಿಸಿದ್ದಾನೆ.

ಸಿದ್ಧರಾಮನ ಕರ್ಮಮಾರ್ಗ ಕ್ರಿಯಾಪ್ರಧಾನವಾದುದಾದರೂ ಕರ್ಮಠವಲ್ಲ, ಆಡಂಬರಶೀಲವಲ್ಲ, ಅರ್ಥರಹಿತವಾದ ಸಂಪ್ರದಾಯ ಜಡವಲ್ಲ ಕರ್ಮ ಜ್ಞಾನ ಭಕ್ತಿಗಳನ್ನು ಒಳಗೊಂಡು ಅದಕ್ಕೆ ಅತೀತವಾಗಿ ನಿಲ್ಲುವಂತಹದು.

*ಮಾನವಿಲ್ಲದ ಭೋಜನವದು ಶ್ವಾನನ ಮಾಂಸವಯ್ಯಾ*
*ಜ್ಞಾನವಿಲ್ಲದ ಕ್ರಿಯೆಯದು ಸಿದ್ಧಗಳಿಗೀಡಯ್ಯಾ*
*ಧ್ಯಾನವಿಲ್ಲದ ಪೂಜೆಯದು ಕಾನನ ಜ್ಯೋತಿಯಯ್ಯಾ*
*ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ ನೀನಿಲ್ಲದ ಭಕ್ತಿಯದು*
*ಚಾಂಡಾಲ ಪಾಕವಯ್ಯಾ*

ಎಂಬ ಮಾತು ಆತನ ಸಮನ್ವಯ ಮಾರ್ಗವನ್ನು ಸ್ಪಷ್ಟಪಡಿಸುತ್ತದೆ. *''ಕರ್ಮವನ್ನು ಮಾಡುತ್ತಲೇ ನಿರ್ಮಲ ಸುಚಿತ್ತವನರಿದು''* ಕರ್ಮ ಭಕ್ತಿ ಜ್ಞಾನಕಾಂಡಗಳನ್ನು ದಾಟಿ *''ಕಾಂಡತ್ರಯವಿಲ್ಲದ ಅಖಂಡ''* ನಾಗುವ ಮಾರ್ಗ ಆತನದು. ''ಕ್ರಿಯೆ ಎಂಬುದು ಪಿಪೀಲಿಕನ ಗುಣ, ಜ್ಞಾನವೆಂಬುದು ವಿಹಂಗಣ ಗುಣ'' ಎಂದು ಒಂದು ಕಡೆ ಅರ್ಥವತ್ತಾಗಿ ಹೇಳಿದ್ದಾನೆ. ಈ ಭೂಮಿಯನ್ನು ಬಿಡದೆ ಅಂಟಿಕೊಂಡ ನಿರಂತರ ವಾದ ಕ್ರಿಯೆ ಪಿಪೀಲಿಕನ ಲಕ್ಷಣ. ಇದನ್ನು ಒಳಗೊಂಡು ಗಗನಗಾಮಿಯಾಗು ವುದು ವಿಹಂಗಮದ ಗುಣ. ಈ ಎರಡೂ ''ಏಕ 'ಕಾಲಕ್ಕಳವಟ್ಟಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಮನೆಯ ಸೂರೆಗೊಂಬ ತಸ್ಕರ ಜ್ಞಾನವೆನಿಸಿತ್ತು.'' ಎಂದು ಕರ್ಮ ಜ್ಞಾನಗಳ ಸಮುದಾಯ ಸಾಮರ್ಥ್ಯದಿಂದ ಸೂಚಿಸುತ್ತಾನೆ.

*''ನೋಡುವುದು ನೋಡಲೇ ಬೇಕು*
*ಮಾಡುವುದು ಮಾಡಲೇಬೇಕು*
*ನೋಡಿ ಮಾಡಿ ಮನದಲ್ಲಿ ಲೀಢವಾಗಿರಬಾರದು*
*ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ.''*

ಎಂಬ ಉದ್ಗಾರವನ್ನು ತೆಗೆದಿದ್ದಾನೆ. ''ತನುವಿದ್ದು ತನುವಿಲ್ಲ, ಮನವಿದ್ದು ಮನವಿಲ್ಲ, ಭಾವವಿದ್ದು ಬುದ್ಧಿಯಿಲ್ಲ. ನೀನೆಂಬುದುಂಟಾಗಿ ಭೃತ್ಯಾಚಾರವಿಲ್ಲ, ನಾನೆಂಬುದುದುಂಟಾಗಿ ಅಹಂಕಾರವಿಲ್ಲ'' ಎಂದು ಮುಂತಾಗಿ ಹೇಳುತ್ತಾ ''ನಿರ್ಲಿಪ್ತವೆಂಬುದ ಇದರಿಂಗೆ ನುಡಿದು ಹೇಳಬಾರದ' ನಿಲವನ್ನು ಆತನ ಕರ್ಮಮಾರ್ಗ ಸಾಧಿಸಿದೆ.

ಸಿದ್ಧರಾಮನ ಜೀವನವನ್ನು ಒಟ್ಟಾಗಿ ನೋಡುವಾಗ ಮೊಟ್ಟಮೊದಲು ಎದ್ದು ಕಾಣುವ ಸಂದೇಶವೆಂದರೆ ಇದೇ. ಪ್ರಾರಂಭದಲ್ಲಿಯೇ ಆತನ ಸಾಧನೆ ಅನಿರೀಕ್ಷಿತ ತಿರುವನ್ನು ಪಡೆಯಿತು. ಇತರರು ಕಷ್ಟಪಟ್ಟು ಸಾಧಿಸಬೇಕಾದ ಶಮದಮಾದಿ





ಸಾಧನ ಸಂಪತ್ತು ಅಪೂರ್ವ ಸಂಸ್ಕಾರದಿಂದ ಮತ್ತು ದೈವಕೃಪೆಯಿಂದ ಆತನಿಗೆ ಸಹಜವಾಗಿಯೇ ಕರಗತವಾಯಿತು. ಸಂಸಾರದ ಯಾವ ಬಂಧನಕ್ಕೂ ಒಳಗಾಗದೆ ಸಹಜ ವೈರಾಗ್ಯದಿಂದ ಅದನ್ನು ಮೀರಿ ನಿಲ್ಲಲು ಸಮರ್ಥನಾದನು. ಆದರೆ ಅದು ಜೀವನ ವಿಮುಖವಾದ ಶುಷ್ಕವೈರಾಗ್ಯದಿಂದ ಜಡವಾಗಿ ಪರಿಣಿಸಲಿಲ್ಲ. ಚಿಕ್ಕ ಸಂಸಾರವನ್ನು ಬಿಟ್ಟು ಜಗತ್ತಿನ ದೊಡ್ಡ ಸಂಸಾರವನ್ನು ಕಟ್ಟಿಕೊಂಡು ಅದರ ಒಳಿತಿಗಾಗಿ ಟೊಂಕಕಟ್ಟಿದ ಆದರ್ಶ ಸನ್ಯಾಸಿಯನ್ನು ಈತನಲ್ಲಿ ಕಾಣುತ್ತೇವೆ. ಆಧುನಿಕ ಯುಗದ ಧೀರಸನ್ಯಾಸಿ ಸ್ವಾಮಿ ವಿವೇಕಾನಂದರ ಸಂದೇಶ ಈ ಸಂದರ್ಭದಲ್ಲಿ ನೆನಪಿಗೆ ಬಂದರೆ ಆಶ್ಚರ್ಯವಿಲ್ಲ.

ಈತನ ಸಾಧನೆಯ ಇನ್ನೊಂದು ಮುಖ್ಯವಾದ ಅಂಶವೆಂದರೆ ಯೋಗಸಾಧನೆಯ ಎಲ್ಲ ಹಂತಗಳಲ್ಲೂ ಸ್ವಾನುಭಾವದಿಂದ ಮುನ್ನಡೆದು ಅದನ್ನು ಪರಿಪೂರ್ಣಗೊಳಿಸಿದರು. ಹಠ, ಲಯ, ಮಂತ್ರಯೋಗಗಳು ರಾಜಯೋಗವನ್ನು ದಾಟಿ ಶಿವಯೋಗದಲ್ಲಿ ತೊಡಗಿದವು. ಎಲ್ಲ ಯೋಗಗಳಲ್ಲಿಯೂ ಆತ ಪರಿಣತನೆಂಬುದನ್ನು ವಚನಗಳಲ್ಲಿ ಮತ್ತು ಆತನ ತ್ರಿವಿಧಿಗಳಿಂದಲೂ ಕಂಡುಕೊಳ್ಳಬಹುದಾಗಿದೆ. ಕುಂಡಲಿನೀ ಶಕ್ತಿಯನ್ನು ಉನ್ಮುಖಿಗೊಳಿಸಿ ಷಟ್‌ಚಕ್ರಗಳಲ್ಲಿ ಮೇಲೇರುವ ಅನುಭವಗಳು ಅಲ್ಲಿ ಮತ್ತೆ ಮತ್ತೆ ಬರುತ್ತವೆ.

*ವಿವೇಕ ಎಂಬುದು ಬೇರಿಲ್ಲ ಕಂಡಯ್ಯಾ*
*ನವನಾಳದ ಸುಳುಹ ತೊಡೆದು ಸುನಾಳವ ಶುದ್ಧವ ಮಾಡುವೆ*
*ಅಷ್ಟದಳ ಕಮಲವನು ಊರ್ಧ್ವಮುಖವಾಗಿ*
*ನಿಜಪದದಲ್ಲಿ ನಿಲಿಸುವೆ*
*ಐವತ್ತೆರಡರಕ್ಷರವ ತಿಳಿದು ನೋಡಿ ಏಕಾಕ್ಷರದಲ್ಲಿ ನಿಲ್ಲಿಸುವೆ*
*ಕಪಿಲಸಿದ್ಧ ಮಲ್ಲಿಕಾರ್ಜುನಾ ಎನ್ನ ವಿಚಾರ ನೀನೇ ಬಲ್ಲೆ.*

ಎನ್ನುವ ವಚನದಲ್ಲಿ ಅವನ ಷಟ್‌ಚಕ್ರವಿವೇಕ ಮೂಡಿದೆ. ಆ ಷಟ್‌ಚಕ್ರಗಳಲ್ಲಿರುವ ಒಂದೊಂದು ಕಮಲದ ದಳದ ಮೇಲೂ ಇರುವ ಅಕ್ಷರಗಳು, ಆ ಶಬ್ದಪ್ರಪಂಚವನ್ನೆಲ್ಲಾ ಒಳಗೊಳ್ಳುವ ರಕ್ಷಾಕ್ಷರ ಇವುಗಳ ಸತತ ಪರಿಭಾವನೆಯಿಂದ ಪಡೆದಿರುವ ಯೋಗಾನುಭವ ಇಲ್ಲಿದೆ. ಇದರ ಮುಂದಿನ ಅನುಭವಗಳನ್ನು ಈ ಕೆಳಗಿನ ವಚನದಲ್ಲಿ ಕಾಣಬಹುದು.

*ಅಂತರಂಗದಲ್ಲಿ ನಿಮ್ಮ ನೋಡುವವನಲ್ಲ*
*ಕೇಳಕಂಡಾ ಎಲೆ ಅಯ್ಯಾ*
*ಬಹಿರಂಗದಲ್ಲಿ ಬಳಸುವವನಲ್ಲ*
*ಕೇಳು ಕಂಡಾ ಎಲೆ ಅಯ್ಯಾ*
*ಸುಷುಮ್ನದ ಬಟ್ಟೆಯ ತುದಿಯನಡರಿ*
*ಸಾವಿರದಳದ ಮಂಟಪದಲಿ ನಿಮ್ಮ ನೆನೆಯುತ್ತ*
*ನೋಡಾ ಕಪಿಲಸಿದ್ಧ ಮಲ್ಲಿನಾಥಯ್ಯಾ.*

ಈಡಾ ಪಿಂಗಳಗಳನ್ನು ನಿಯಂತ್ರಿಸಿ ಸುಷುಮ್ನನಾಡಿಯ ಮೂಲಕ ಆಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧಿ ಆಜ್ಞಾ ಚಕ್ರಗಳನ್ನು ದಾಟಿ ಸಹಸ್ರಾರಕ್ಕೇರುವ ಯೋಗದ ವಿವರಗಳನ್ನು ಆತನ ಇನ್ನು ಅನೇಕ ವಚನಗಳಲ್ಲಿ ಕಾಣಬಹುದು. ಆದರೆ ಈ ಸಾಧನೆಯನ್ನು ಅತಿಯಾಗಿ ಬೆಳೆಸಿ ಅದರಿಂದ ಲಭಿಸುವ ಅಣಿಮಾದಿ ಅಷ್ಟಸಿದ್ಧಿಗಳಿಗೆ ಮರುಳಾಗುವ ಕುಟಲಸಿದ್ಧನಲ್ಲ ಸಿದ್ಧರಾಮ. ಅವುಗಳನ್ನು ಲೌಕಿಕ ಪ್ರಯೋಜನಗಳಿಗೆ ಬಳಸಿಕೊಂಡು ಜನಗಳನ್ನು ಆಕರ್ಷಿಸುವ ಮಟ್ಟಕ್ಕೆ ಆತನ ಯೋಗ ಇಳಿಯಲಿಲ್ಲ. ಸ್ವಾವಲಂಬನೆಯ ಮೇಲೆ ಅವಲಂಬಿತವಾದ ವೈಯಕ್ತಿಕ ಸಾಧನೆಯ ಕಾಯಕ ನಿಷ್ಠೆಯನ್ನು ತನ್ನ ಗುಡ್ಡರಲ್ಲಿ ಬೆಳೆಸಲು ಸಹಾಯಕವಾಗುವಂತಹ ಕರ್ಮಮಾರ್ಗಗಳನ್ನು ಆತ ಅವಲಂಬಿಸಿದ. ಇದು ಇಂದಿಗೂ ಮಹತ್ವಪೂರ್ಣವಾದ ಸಂದೇಶವಾಗಿದೆ.

ಈ ಕರ್ಮಮಾರ್ಗ ಎಲ್ಲ ಯೋಗಗಳನ್ನು ಒಳಗೊಳ್ಳಬಲ್ಲ ಶಿವಯೋಗದತ್ತ ತಿರಿಗಿದುದು ಇನ್ನೊಂದು ಮುಖ್ಯವಾದ ಅಂಶ. ಹಠಯೋಗಾದಿಗಳು ದೈಹಿಕ ಅಥವಾ ಹೆಚ್ಚೆಂದರೆ ಮಾನಸಿಕ ಶಕ್ತಿ ವಿಕಾಸಕ್ಕೆ ಅತಿ ಹೆಚ್ಚಿನ ಪ್ರಾಧಾನ್ಯವನ್ನು ಕೊಡುತ್ತವೆ. ಆದರೆ ಯೋಗ ಇಷ್ಟಕ್ಕೇ ಸೀಮಿತಗೊಳ್ಳದೆ ಮಾನವನ ಅಂತರಂಗದ ಶಕ್ತಿ ಸಾಧ್ಯತೆಗಳ ಎಲ್ಲ ಸ್ತರಗಳನ್ನು ಬಳಸಿಕೊಳ್ಳಬೇಕು ಪೂರ್ಣಮಾನವನನ್ನಾಗಿ ಆತನನ್ನು ಪರಿವರ್ತಿಸಬೇಕು. ಇದನ್ನೇ ಅರವಿಂದರು, (Integral Yoga) ಅಥವಾ ಪೂರ್ಣಯೋಗ ಎಂದು ನಿರ್ದೇಶಿಸಿದ್ದಾರೆ. ಅಲ್ಲಮಪ್ರಭು ಸಿದ್ಧರಾಮರ ಯೋಗಸಾಧನೆ ಆ ಮಟ್ಟಕ್ಕೆ ಏರುವಂತಹುದು. ಅಲ್ಲಮ ತೀವ್ರ ವೈರಾಗ್ಯದಿಂದ ಜಗದ್ಭರಿತ ಜಂಗಮನಾಗಿ ಇದನ್ನು ಸಾಧಿಸಿದರೆ, ಸಿದ್ಧರಾಮ ತನ್ನದೇ ಆದ ಒಂದು ಕ್ಷೇತ್ರವನ್ನು ಕಟ್ಟಿಕೊಂಡು ಕರ್ಮಮಾರ್ಗದಲ್ಲಿ ಮುನ್ನಡೆಯುತ್ತಲೇ ಈ ನಿಲುವನ್ನು ತಲುಪಿದ. ಮಾನವೀಯ ಅನುಕಂಪೆಯಲ್ಲಿ ಯೋಗದ ನಿಜವಾದ ಸತ್ವ ಅಡಗಿದೆ ಎಂಬುದು ಯೋಗ ಪ್ರಪಂಚಕ್ಕೆ ಈತನು ಕೊಟ್ಟ ಬಹುದೊಡ್ಡ ಕೊಡುಗೆ. ಯಾತನಾ ಕ್ಲಿಷ್ಟತೆಯಿಂದ ಸಾಧಿಸಿದ ಷಟ್ ಚಕ್ರಸಾಧನೆಯೆಲ್ಲಾ ಈ ಹಂತದಲ್ಲಿ ಆಂತರಿಕ ಆನಂದದ ವಿಷಯವಾಗಿ ಪರಿಣಮಿಸುತ್ತದೆ. ಈ ಕೆಳಗಿನ ವಚನವನ್ನು ಗಮನಿಸಬಹುದು :

*ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ*
*ವಿಶುದ್ಧಿ ಆಜ್ಞೆ ಎಂದೆಂಬರು*
*– ಈ ಆರ ಬಲ್ಲಡೆ ನೀವು ಹೇಳಿರೆ*
*ಆದಿಯನುಳ್ಳದೇ ಆಧಾರ*
*ಆಧಾರವ ಕೂಡಿಪ್ಪುದೇ ಸ್ವಾದಿಷ್ಠಾನ*
*ಮಣಿಯ ಬೆಳಗಿನಲ್ಲಿಪ್ಪುದೇ ಮಣಿಪೂರಕ*
*ಆಶೆಯಿಲ್ಲದುದೇ ಅನಾಹತ*
*ಅಲ್ಲ ಅಹುದೆಂಬುನತಿಗಳೆದಿಹುದೇ ವಿಶುದ್ಧ*
*ಸರ್ವಜೀವಂಗಳಲ್ಲಿ ದಯವನುಳ್ಳುದೇ ಆಜ್ಞೆ*
*– ಇಂತಿಪ್ಪುದೀಗ ಶಿವಯೋಗ*
*ಉಳಿದ ಅಭ್ಯಾಸಯೋಗಿಗಳ ಕಂಡು ನಗುತಿರ್ದನಯ್ಯಾ*
*ಕಪಿಲಸಿದ್ಧ ಮಲ್ಲಿಕಾರ್ಜುನಾ.*

ಆರು ಚಕ್ರಗಳನ್ನು ಒಂದೊಂದಾಗಿ ಮೇಲೇರುತ್ತಾ ಆದಿ ಆಧಾರೆ ಮಣಿಯ ಬೆಳಗಂಗಗಳನ್ನು ದಾಟಿಕೊಂಡು ಆಶೆಯಿಲ್ಲ

ದುದು, ಒಳಿತು ಕೆಡಕುಗಳನ್ನು ಅತಿಗಳೆದ ನಿರ್ಲಿಪ್ತತೆಗಳನ್ನು ಒಳಗೊಂಡು 'ಸರ್ವಜೀವಂಗಳಲ್ಲಿ ದಯೆಯನ್ನುಳ್ಳ' ಕೊನೆಯ ಆಜ್ಞಾಚಕ್ರಕ್ಕೆ ಬರುವ ಈ ಯೋಗದ ಪೂರ್ಣನಡೆ ಷಟ್‌ಸ್ಥಲದ ಶಿವಯೋಗ ಸಾಧನೆಗೆ ಜೀವಂತ ಉದಾಹರಣೆಯಾಗಿದೆ. ಇಂತಹ ಅನೇಕ ವಚನಗಳಲ್ಲಿ ಮತ್ತು ತ್ರಿವಿಧಗಳಲ್ಲಿ ಆತನ ಆಶಯ ಅಭಿವ್ಯಕ್ತಗೊಂಡಿದೆ.

ಇದನ್ನು ಸಾಧಿಸಬಹುದಾದ ವೈಯಕ್ತಿಕ ಸಾಧನೆ ಮತ್ತು ಅದಕ್ಕೆ ಅಗತ್ಯವಾದ ಸತ್ಕ್ರಿಯಾಚರಣೆ ಇವುಗಳನ್ನು ಕುರಿತು ಆತ ಹೇಳುವ ಮಾತುಗಳು ಇತರರ ಶರಣರಂತೆಯೇ ಉದಾತ್ತ ನೈತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ಎತ್ತಿ ಹಿಡಿಯುತ್ತವೆ. ಸಂಗ್ರಹವಾಗಿ ಅರ್ಥವತ್ತಾಗಿ ಪರಿಣಾಮಕಾರಿಯಾಗಿ ಬಂದ ಆ ಮಾತುಗಳು ಶರಣರ ವಿಚಾರಧಾರೆಯನ್ನು ಶ್ರೀಮಂತಗೊಳಿಸಿವೆ. ಅವುಗಳ ದೀರ್ಘವಾದ ವಿವೇಚನೆಗೆ ಹೋಗದೆ ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ ಜನಸಾಮಾನ್ಯರನ್ನು ಮುಟ್ಟಿ ಎಚ್ಚರಿಸುವ ಪ್ರಯತ್ನ. ಬಸವಣ್ಣ ಅದನ್ನು ಒಂದು ರೀತಿಯಲ್ಲಿ ಸಾಧಿಸಿದರೆ, ಸಿದ್ಧರಾಮ ಇನ್ನೊಂದು ರೀತಿಯಲ್ಲಿ ಅದನ್ನು ಕೈಗೊಡಿಸಿಕೊಂಡನು. ಆತ ಲೌಕಿಕ ಜೀವನದಲ್ಲಿದ್ದು ಸಂಸಾರಿಯಾಗಿದ್ದುದಲ್ಲದೆ ಒಂದು ದೇಶದ ಮಹಾಭಂಡಾರಿಯೂ ಆಗಿದ್ದವನು. ಆದರೆ ಸಿದ್ಧರಾಮ ಲೌಕಿಕಕ್ಕೆ ಅಂಟದೆ, ಅಧಿಕಾರಕ್ಕೆ ವಶನಾಗದೆ, ಜನಸಾಮಾನ್ಯರೊಡನೆ ತನ್ನನ್ನು ಏಕೀಭವಿಸಿಕೊಂಡು ತನ್ನ ನಡೆ ನುಡಿಗಳಿಂದ ಅವರ ಹೃದಯವನ್ನು ಗೆದ್ದವನು. ಸಿದ್ಧರಾಮ ಲೌಕಿಕ ವಿಮುಖನಾದ ಸನ್ಯಾಸಿ, ಮಹಾಯೋಗಿ, ಆದರೆ ಜೀವನ ವಿಮುಖವಾದ ನಿಷ್ಕ್ರಿಯೆಯಲ್ಲಿ ಕುಳಿತವನಲ್ಲ. ಲೌಕಿಕ ಜೀವನದ ಇತಿಮಿತಿಗಳನ್ನು ಕಂಡು ಜನಸಾಮಾನ್ಯರಿಗಾಗಿ ಮರುಗಿ ಅನುಕಂಪೆಯಿಂದ ಅವರ ಅಂತಃಕರಣವನ್ನು ಮುಟ್ಟಿದವನು. ಮಗು ಮಾಡುವ ತಪ್ಪನ್ನು ತಾಯಿ ಕ್ಷಮಿಸುವಂತೆ, ಭಕ್ತರು ತಪ್ಪಿದರೆ ಅವರನ್ನು ತಿರಸ್ಕರಿಸದೆ ಮತ್ತೆ ಮತ್ತೆ ಎತ್ತಿ ಅವರನ್ನು ಮುನ್ನಡೆಸಿದವನು. ಈ ಕೆಳಗಿನ ವಚನ ಆತನ ಕ್ಷಮಾಧರ್ಮಕ್ಕೆ ಕನ್ನಡಿ ಹಿಡಿದಿದೆ :

*ನುಡಿ ಹಿಡಿದು ತಾರ್ಕಿಕರಂತೆ ತರ್ಕಿಸುವಾತ ನಾನಲ್ಲ*
*ಆಡುವ ಮಾತಿಗೆ ಈಡ ಮಾಡುವ ನುಡಿಯಲ್ಲಿ*
*ವಾಕ್ಪಟುತನವು ನಿಜವಲ್ಲ*
*ನಡೆಯುವ ನರರು ಕುಂಟುವುದುಂಟು*
*ಹೋಗುವ ಮನುಜ ಎಡಹುವುದುಂಟು*
*ಮಾತಾಡುವ ಶರಣ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ತಪ್ಪಿದಡೆ*
*ತಪ್ಪಲ್ಲ ಕೇಳಾ ಪ್ರಭುವೆ.*

ತರ್ಕದಿಂದ ವಾಕ್ಪಟುತ್ವದಿಂದ ವ್ಯಕ್ತಿಗಳನ್ನು ತಿದ್ದುವುದು ಸಾಧ್ಯವಿಲ್ಲ. ಸಾಧಕರ ದೌರ್ಬಲ್ಯವನ್ನು ತಿಳಿದು ಅದನ್ನು ತಿದ್ದಿಕೊಳ್ಳುವ ಅವಕಾಶವನ್ನು ಕೊಡುವ ಔದಾರ್ಯದಿಂದ ಅವರ ಮನಸ್ಸನ್ನು ಪರಿವರ್ತನೆಗೊಳಿಸುತ್ತಾ ಉದಾತ್ತಗೊಳಿಸುತ್ತಾ ಹೋಗಬೇಕು. ಇದನ್ನು ಅರಿತಿದ್ದರಿಂದಲೇ ಸಿದ್ಧರಾಮ ಸಾಮಾನ್ಯರನ್ನೂ ಗುಡ್ಡರನ್ನಾಗಿ ಮಾಡಿ ಸೊನ್ನಲಿಗೆಯನ್ನು ಅಭಿನವ ಶ್ರೀಶೈಲವನ್ನಾಗಿಸಿದನು.

ಮನಸ್ಸಿನ ಸ್ವರೂಪವನ್ನು ಅದರ ಇತಿಮಿತಿ, ಸಾಧನ-ಸಾಧ್ಯತೆಗಳನ್ನು ಸಿದ್ಧರಾಮ ಬಹಳ ಬಲ್ಲವನಾಗಿದ್ದುದರಿಂದ ಅದರ ಸಿದ್ಧಿ ಸಾಧ್ಯವಾಯಿತು.

*ಮನದಲ್ಲಿ ಸಂಕಲ್ಪ ವಿಕಲ್ಪಗಳು ನೋಡಯ್ಯಾ*
*ಮನಸ್ಸಿನ ಕಾರ್ಯವೇ ಪುಣ್ಯಪಾಪ ನೋಡಯ್ಯಾ*
*ಮನಃಕಾರ್ಯಂ ಜಗದ್ಭೇದಂ ಎಂಬುದು ಪುಸಿಯಲ್ಲ ನೋಡಾ*
*ಕಪಿಲಸಿದ್ಧ ಮಲ್ಲಿಕಾರ್ಜುನಾ.*

ಎಂದು ಮನಸ್ಸಿನ ಸ್ವರೂಪವನ್ನು ಒಂದು ಕಡೆ ಹೇಳಿದರೆ **"ದೇಹವೇ ನಾನೆಂದು ನುಡಿದೆ ಎಲೆ ಮನವೆ? ದೇಹದಲ್ಲಿನ ಗುಣಂಗಳು ನಿನ್ನಲ್ಲಿ ಕಂಡಯ್ಯಾ ಮನವೇ"** ಎಂದು ಮುಂತಾಗಿ ಹೇಳುತ್ತಾ ಪಂಚಭೂತಗಳ ಗುಣಗಳಿಗೆಲ್ಲಾ ಮನಸ್ಸೇ ಕಾರಣವೆಂದು "ಈ ಪಂಚತ್ವದ ಗುಣ ನಿನ್ನಲ್ಲಿರಲು ನೀನೇ ಪಂಚಮುಖ ನೋಡಾ ಮನವೇ" ಎಂದು ಇನ್ನೊಂದು ಕಡೆ ಮನಸ್ಸಿನ ಸರ್ವಶಕ್ತಿತ್ವಕ್ಕೆ ಶರಣಾಗಿದ್ದಾನೆ. ಇದರ ಮೂಲಕವಾಗಿಯೇ ಸಾಧಕ ಮೇಲೇರಬೇಕು ಮನಸ್ಸಿನಿಂದಲೇ ಗೆಲ್ಲಬೇಕು; ಬೇರೆ ಮಾರ್ಗವಿಲ್ಲ. ಸಂಕಲ್ಪ ವಿಕಲ್ಪಗಳಿಂದ ಕೂಡಿದ ಮನಸ್ಸನ್ನು ಗೆಲ್ಲಬೇಕಾದರೆ ಅದರ ಮೇಲೆ ಅಸಹಜವಾದ ಬಲಾತ್ಕಾರ ಸಲ್ಲದು. ಆದ್ದರಿಂದಲೇ ಬಲಾತ್ಕಾರದ ವೈರಾಗ್ಯ ವಿಫಲವಾಗುತ್ತದೆ.

*ಭಕ್ತನ ಮನ ಹೆಣ್ಣಿನೊಳಗಾದಡೆ ವಿವಾಹವಾಗಿ ಕೂಡುವುದು*
*ಭಕ್ತನ ಮನ ಮಣ್ಣಿನೊಳಗಾದಡೆ ಕೊಂಡು ಆಲಯವ ಮಾಡುವುದು*
*ಭಕ್ತನ ಮನ ಹೊನ್ನಿನೊಳಗಾದಡೆ ಬಳಲಿ ದೊರಕಿಸುವುದು ನೋಡಾ*
*ಕಪಿಲ ಸಿದ್ಧಮಲ್ಲಿಕಾರ್ಜುನ.*

ಎನ್ನುವ ವಚನದಲ್ಲಿ ಮನಸ್ಸಿನ ಸಹಜ ಪ್ರವೃತ್ತಿಗಳನ್ನು ಧರ್ಮಬದ್ಧವಾಗಿ ಈಡೇರಿಸಿಕೊಂಡು, ಆ ಮೂಲಕವೇ ಅವುಗಳ ಮಿತಿಯನ್ನು ಮನಸ್ಸು ಅರಿಯುವಂತೆ ಮಾಡಬೇಕೆಂಬುದನ್ನು ಹೇಳುತ್ತಾನೆ. ಕ್ರಮೇಣ ಸಂಕಲ್ಪವಿಕಲ್ಪಗಳು ಅಳಿದು ಅಂತರಂಗ ದಲ್ಲಿ ಶಿವಭಾವವೇ ತುಂಬುವಂತಾಗಬೇಕು.

*ಮನವೆಂಬ ಸಂಕಲ್ಪವನರಿಯೆನು*
*ಸಂಕಲ್ಪ ಸಿದ್ಧಿಯಾಯಿತ್ತಾಗಿ*
*ಸಂಕಲ್ಪವೆಂಬ ಸಂಬಂಧವನರಿಯೆನು*
*ನಿಮ್ಮ ವಿಚಾರವೆಡೆಗೊಂಡಿತ್ತಾಗಿ*
*ನಿಮ್ಮ ವಿಚಾರವೇ ಅಂತರಂಗದೊಳಗೆ ತುಂಬಿತ್ತಾಗಿ*
*ಎನ್ನ ಮನದ ಮುಂದೆಲ್ಲಾ ನೀನೆಯಾಗಿರ್ದೆಯಯ್ಯಾ*
*ಕಪಿಲಸಿದ್ಧಮಲ್ಲಿನಾಥಯ್ಯಾ.*

ಎಂಬ ಮಾತಿನಲ್ಲಿ ಮನಸ್ಸನ್ನು ಪಳಗಿಸಿ ಉದಾತ್ತೀಕರಿಸಿ ಕೊಳ್ಳುವುದರ ರಹಸ್ಯವನ್ನು ಹೇಳಿದ್ದಾನೆ.





*ಮನವೆಂಬುದು ಬೇರಿಲ್ಲ*
*ಮಹಾದೇವನ ಮಹಾ ಆರುಹು ನೋಡಾ*
*ಸಂಕಲ್ಪವಿಕಲ್ಪಗಳ ಧರಿಸಿದಲ್ಲಿ ಮನವೆನಿಸಿತ್ತು*
*ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು*
*ಅಳಿದ ಭಾವ ತಲೆದೋರಿದಲ್ಲಿ*
*ಕಪಿಲಸಿದ್ಧ ಮಲ್ಲಿಕಾರ್ಜುನನೆನಿಸಿತ್ತು.*

ಎಂಬ ವಚನವಂತೂ ಸಾಧಕನ ಅಂತರಂಗಕ್ಕೆ ಹಿಡಿದ ಅನುಭವದ ಕನ್ನಡಿ. ಅದರ ಶೋಧನೆಗೆ ಹಚ್ಚಿದ ವೈಚಾರಿಕ ಜರಡಿ.

ಇನ್ನು ಸಿದ್ಧರಾಮನ ತಾತ್ವಿಕ ದೃಷ್ಟಿ ತ್ರಿವಿಧದಾಸೋಹ, ಸರ್ವಾರ್ಪಣೆ, ಸಾಮರಸ್ಯದ ನಿಲವು. ಅಂತೆಯೇ ಅವನ ಬೋಧನೆಯ ಸೊಗಸು, ವಚನಗಳ ಸಾಹಿತ್ಯ ಮೌಲ್ಯ ಈ ಮೊದಲಾದವು ಶರಣರ ಒಟ್ಟು ಸಾಧನೆಯಲ್ಲಿ ವಿಶಿಷ್ಟವಾಗಿ ನಿಲ್ಲುವಂತಹ ಮಹತ್ವವನ್ನು ಪಡೆದಿದೆ. ಅವುಗಳನ್ನು ವಿವೇಚಿಸುವುದು ಇಲ್ಲಿನ ಉದ್ದೇಶವಲ್ಲ. ಈ ಮೊದಲೇ ಹೇಳಿದಂತೆ ಶರಣ ಸಂದೇಶಕ್ಕೆ ಸಂಗತವಾಗಿದ್ದೂ ತನ್ನ ವಿಶಿಷ್ಟತೆಯನ್ನು ಉಳಿಸಿಕೊಂಡು ಹೇಗೆ ಅದರ ವ್ಯಾಪಕತೆಗೆ ಕಾರಣನಾಗಿದ್ದಾನೆಂಬುದನ್ನು ನೋಡುವುದು ಮಾತ್ರ ಇಲ್ಲಿನ ಮುಖ್ಯ ಆಶಯ. ಆ ದೃಷ್ಟಿಯಿಂದ ಕೆಲವು ಅಂಶಗಳನ್ನು ಇಲ್ಲಿ ಗಮನಿಸಲಾಗಿದೆ.

ಒಟ್ಟಿನಲ್ಲಿ ಸಿದ್ಧರಾಮನ ಜೀವನ, ಸಾಧನೆ ಮತ್ತು ಸಿದ್ಧಿಗಳಿಂದ ಪಡೆಯಬಹುದಾದ ಸಂದೇಶ ಪ್ರಮುಖವಾಗಿದೆಯೆಂದು ಹೇಳಬಹುದು. ಅನುಕಂಪೆ, ಕರ್ಮಮಾರ್ಗ ಮತ್ತು ಪೂರ್ಣಯೋಗ ಎಂದು ಅವುಗಳನ್ನು ಗುರುತಿಸಬಹುದು. ಅವನ ಜೀವನ ಸನ್ಯಾಸಿಯ ಜೀವನ. ಆದರೆ ಮಾನವೀಯ ಅನುಕಂಪೆಯಿಂದ ಮಿಡಿಯುವಂತಹುದು. ಯಾರನ್ನೂ ನೋಯಿಸಲಾಗದ ಲೋಕಕಾರುಣ್ಯವೇ ಇವನ ಸಾಧನೆಯ ಅಡಿಗಲ್ಲು. "ಒಬ್ಬರ ಮನವ ನೋಯಿಸಿ ಒಬ್ಬರ ಮನೆಯ ಘಾತವ ಮಾಡಿ ಗಂಗೆಯಲ್ಲಿ ಮುಳುಗಿದೊಡೇನಾಗುವುದಯ್ಯಾ" ಎಂದು ಕೇಳುತ್ತಾನೆ. ಈ ಮಾನವೀಯ ಅನುಕಂಪೆ ಕರ್ಮಮಾರ್ಗದಲ್ಲಿ ಆತನನ್ನು ತೊಡಗಿಸಿತು. ಕರ್ಮಗಳು ಬಂಧಕವಾಗಬಾರದು ತಾರಕವಾಗಬೇಕೆಂಬುದು ಆತನ ಸಂದೇಶ. ಅಹಂಕಾರ ಮೂಲವಾಗಿ ಆಡಂಬರಯುಕ್ತವಾದರೆ ಕರ್ಮಮಾರ್ಗ ಕುಂಟುತ್ತದೆ. ಅಂತಹ ಕರ್ಮಗಳಿಂದ ಜನಪ್ರಿಯತೆ ಸಿಕ್ಕಬಹುದು. ಆದರೆ ಜನಹಿತ ಸಾಧಿತವಾಗುವುದಿಲ್ಲ. ಮಲ್ಲಿಕಾರ್ಜುನನ ಚಿತ್ತಕ್ಕೆ ಅವು ಮುಟ್ಟುವುದಿಲ್ಲ.

*ಕಾಜಿನ ಮಣಿ ಪಚ್ಚದಂದವಿರೆ*
*ಕಾಜಿನ ಮಣಿಯೇ ಪ್ರಸಿದ್ಧ*
*ಲೋಕದ ಮಾನವ ಯೋಗಿಯಂತಿರೆ*
*ಲೋಕದ ಮಾನವನೇ ಪ್ರಸಿದ್ಧ*
*ಬಾಹ್ಯವರ್ಣ ಜನಪ್ರಸಿದ್ಧವಲ್ಲದೆ*
*ಕಪಿಲಸಿದ್ಧ ಮಲ್ಲಿಕಾರ್ಜುನನ ಚಿತ್ತಕ್ಕೆ ಪ್ರಸಿದ್ಧವಲ್ಲ.*

ಎಂಬುದು ಆತನ ಒಂದು ವಚನ. ಗಾಜಿನ ಮಣಿಯೊಂದು ಪಚ್ಚೆರತ್ನದಂತಿದ್ದರೆ ಈ ರತ್ನಕ್ಕಿಂತ ಆ ಮಣಿಯೇ ಪ್ರಸಿದ್ಧವಾಗುತ್ತದೆ. ಲೋಕದ ಮಾನವನೊಬ್ಬ ಯೋಗಿಯಂತೆ ವರ್ತಿಸಿದರೆ ಈ ಯೋಗಿಗಿಂತ ಆ ವೇಷಧಾರಿಯೇ ಹೆಚ್ಚು ಪ್ರಸಿದ್ಧನಾಗುತ್ತಾನೆ. ಹಾಗೆ ಬಾಹ್ಯವರ್ಣ ಜನಪ್ರಸಿದ್ಧಿಯನ್ನು ಪಡೆಯುತ್ತದೆ. ಆದರೆ ಶಿವನ ಚಿತ್ತಕ್ಕೆ ಅದು ಮುಟ್ಟುವುದಿಲ್ಲ ಎಂಬ ಈ ಮಾತು ಅವರ ಕರ್ಮಮಾರ್ಗದ ಸತ್ವವನ್ನು ಎತ್ತಿ ಹಿಡಿಯುತ್ತದೆ. ಜನಪ್ರಸಿದ್ಧಿಗಾಗಿ ಬಾಹ್ಯವರ್ಣದಿಂದ ಕರ್ಮಮಾರ್ಗಕ್ಕೆ ಆತ ತೊಡಗಿದವನಲ್ಲ, ಅದನ್ನು ಒಪ್ಪುವವನೂ ಅಲ್ಲ. ಅಂತರಂಗದ ಬಹಿರಂಗಗಳು ಒಂದಾದ ನಿರ್ಮಲಕರ್ಮ ಆತನ ಕರ್ಮಯೋಗದ ರಹಸ್ಯ.

ಇದರ ಮುಂದಿನದೇ ಆತ ಸಾಧಕರ ಮುಂದಿಟ್ಟ ಬಹುದೊಡ್ಡ ಸಂದೇಶ : ಅದೇ ಪೂರ್ಣಯೋಗ. ಅದು ಕೇವಲ ಹಠ, ಲಯ, ಮಂತ್ರಯೋಗಾದಿ ಸಾಧನೆಯಾಗಲೀ ಅದರಿಂದ ಲಭಿಸುವ ಸಿದ್ಧಿಯಾಗಲೀ ಅಲ್ಲ ಅಥವಾ ಆಂತರಿಕ ಶಕ್ತಿಯನ್ನು ಕಂಡುಕೊಳ್ಳದೆ ಅಹಂಮೂಲವಾದ ಕರ್ಮ ಮಾರ್ಗವೂ ಅಲ್ಲ. ಎರಡನ್ನೂ ಸಮನ್ವಯಗೊಳಿಸಿದ ಪೂರ್ಣಯೋಗ ಅದು. ಈತನ ಸಾಧನೆಯಿಂದ ಶಿವಯೋಗ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿತು. ಕರ್ಮಗಳನ್ನು ಮಾಡುತ್ತಲೇ ಸ್ವಾನುಭಾವದಿಂದ ಸಾಮರಸ್ಯವನ್ನು ಪಡೆಯುವ ವಿಶಿಷ್ಟ ಮಾರ್ಗವನ್ನು ಆತ ನಡೆದು ತೋರಿಸಿದ್ದಾನೆ. **"ಸ್ವಾನುಭಾವವನರಿಯದವನೇತರ ಸುಖಿಯಯ್ಯಾ?"** ಎಂದು ಕೇಳುತ್ತಾನೆ ಬಂದು ವಚನದಲ್ಲಿ. ಆ ಸ್ವಾನುಭಾವದ ನಿಲವನ್ನು, ಸಾಮರಸ್ಯದ ಸುಖವನ್ನು ಅದನ್ನು ಸಾಧಿಸಲು ಕಾರಣವಾಗುವ ಶಿವಶಕ್ತಿ ಸಂಪುಟವಾದ ಯೋಗದ ಹೊಲಬನ್ನು ಅನೇಕ ರೀತಿಯಲ್ಲಿ ವ್ಯಕ್ತಪಡಿಸಿದ್ದಾನೆ. ಆ ಮಾತುಗಳೆಲ್ಲವನ್ನೂ ಪರಿಭಾವಿಸಿದಷ್ಟೂ ಆತನ ಜೀವನ ಮತ್ತು ಸಂದೇಶಗಳ ಆಂತರಿಕ ಅರ್ಥ ವಿಸ್ತಾರವಾಗುತ್ತಾ ಹೋಗುತ್ತದೆ.

ಮನೋವೇಗದಿಂದ ಮೌಲ್ಯಗಳು ಬದಲಾಗುತ್ತಿರುವ ಇಂದಿನ ಸಂಕೀರ್ಣ ಜಗತ್ತಿನಲ್ಲಿ ಸಿದ್ಧರಾಮನ ಸಂದೇಶದ ಸ್ಥಾನವೇನೆಂಬ ಪ್ರಶ್ನೆ ಪ್ರಮುಖವಾಗುತ್ತದೆ. ಮಾನವನ ಪೂರ್ಣಜೀವನದ ಮಾನವೀಯ ಸಮಸ್ಯೆಗಳನ್ನು ಅದರ ವೈಚಾರಿಕ ನಿಲುವಿನಲ್ಲಿ ನೋಡಿರುವುದರಿಂದಲೂ ಆತನ ಸಿದ್ಧಿಗಳಿಂದ ಮೂಲಭೂತ ಅಂಶಗಳು ಇಂದಿಗೂ ಪ್ರಸ್ತುತವಾಗಿ ಉಳಿಯುತ್ತವೆ. ಆಚರಣೆಯ ಕೆಲವು ಹೊರ ಕವಚಗಳು ಹೆಚ್ಚು ಕಡಿಮೆ ಆಗಬಹುದು. ಆದರೆ ಒಳಗಿರುವ ಸತ್ವ ಇಂದಿಗೂ ಉಜ್ವಲವಾಗಿ ಉಳಿಯಬೇಕಾದುದು ಮಾನವೀಯ ಅನುಕಂಪೆ, ನಿರ್ಲಿಪ್ತ ಕರ್ಮಮಾರ್ಗ, ಪೂರ್ಣ ವೈಚಾರಿಕ ಆಂತರಿಕ ವಿಕಾಸ – ಇವು ಯಾವ ಕಾಲಕ್ಕೂ ಹಳತಾಗದ ಮೌಲ್ಯಗಳು. ಈ ಮೌಲ್ಯವನ್ನು ಪೂರ್ಣರೂಪದಲ್ಲಿ ಆತನ ಜೀವನ, ಸಾಧನೆ ಮತ್ತು ಸಂದೇಶಗಳು ಒಳಗೊಳ್ಳುವುದರಿಂದ ಅವು ಎಂದೆಂದಿಗೂ ಸಾಧಕರಿಗೆ ಮಾರ್ಗದರ್ಶಕ ಶಕ್ತಿಯಾಗಿ ಉಳಿಯುವ ಮಹತ್ವವನ್ನು ಪಡೆದಿವೆ.

❀

*(ಕೃಪೆ : ವೀರಶೈವ ದೀಪ್ತಿ)*

# ಅನ್ನದಾನ

- ಹೆಚ್. ಗಂಗಾಧರನ್
೧೧೮೯, ವಿಷ್ಣುವರ್ಧನ ರಸ್ತೆ
ಚಾಮರಾಜಪುರಂ, ಮೈಸೂರು-೪

"ಅನ್ನಾದ್ಭವಂತಿ ಭೂತಾನಿ" ಅಂದರೆ ಅನ್ನದಿಂದಲೇ ಸರಳ ಜೀವಿಗಳ ಉತ್ಪತ್ತಿ ಎಂದು ಗೀತೆಯಲ್ಲಿ ಹೇಳಿದೆ. ಎಲ್ಲಾ ಜೀವರಾಶಿಗಳ ಬದುಕು ಅನ್ನವನ್ನೇ ಆಶ್ರಯಿಸಿದೆ. ಅನ್ನದಾನ ಕ್ಕಿಂತ ಇನ್ನು ದಾನವಿಲ್ಲವೆಂಬ ಪ್ರಚಲಿತ ನಾಣ್ಣುಡಿಯೊಂದಿದೆ. ತನ್ನಂತೆ ಮತ್ತೊಂದು ಜೀವಿಯು ಬದುಕಬೇಕೆಂಬ ಭಾವನೆಗೂ ಎಲ್ಲಾ ವ್ಯಕ್ತಿಗಳಿಲ್ಲರಬೇಕು. ಅದಕ್ಕಾಗಿಯೇ ಭಾರತೀಯ ಸಂಸ್ಕೃತಿ ಯಲ್ಲಿ ಅನ್ನದಾನಕ್ಕೆ ಮಹತ್ವವಿದೆ. ಪ್ರಾಚೀನ ಧರ್ಮ ಶಾಸ್ತ್ರಗಳಲ್ಲಿ ಮಾನವ ಮಾಡುವ ಪಾಪಕ್ಕೆ ವಿವಿಧ ಪ್ರಾಯಶ್ಚಿತ್ತವನ್ನು ಹೇಳಿದೆ. ಅದರಲ್ಲಿ ಅನ್ನದಾನಕ್ಕೆ ಪ್ರಾಶಸ್ತ್ಯವನ್ನು ನೀಡಿದೆ.

ಶರಣ ಸಂಸ್ಕೃತಿಯಲ್ಲಿ ಅನ್ನದಾನಕ್ಕೆ ದಾಸೋಹ ಎಂಬ ಪವಿತ್ರ ಶಬ್ದವನ್ನು ಬಳಸಿದೆ. ಅಲ್ಲಮ ಪ್ರಭುಗಳು *"ಹಣತೆಯೂ ಇದೆ, ಬತ್ತಿಯೂ ಇದೆ, ಜ್ಯೋತಿಯು ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೋ ? ಗುರುವಿದೆ, ಲಿಂಗವಿದೆ, ಶಿಷ್ಯನ ಸುಜ್ಞಾನವಂಕುರಿಸದನ್ನಕ್ಕರ ಭಕ್ತಿಯೆಲ್ಲಿಯದೋ? ಸೋಹ ಮೆಂಬುದ ಕೇಳಿ, ದಾಸೋಹವ ಮಾಡದಿದ್ದರೆ ಅತಿಗಳೆದೆನು ಗುಹೇಶ್ವರಾ"* ಎಂದಿದ್ದಾರೆ.

ಶಿವನಾಗಿದ್ದೇನೆಂಬ ಭಾವನೆಯಿರಲಿ, ಐಕ್ಯಸ್ಥಾನವನ್ನು ಹೊಂದಿರಲಿ ದಾಸೋಹವ ಮಾಡದಿದ್ದರೆ ಅದು ನಿಷ್ಪ್ರಯೋಜನ ಎಂದಿದ್ದಾರೆ.

ವೈರಾಗ್ಯ ಚಕ್ರವರ್ತಿಗಳಾದ ಪ್ರಭುದೇವರೇ ದಾಸೋಹ ತತ್ವವನ್ನು ಪ್ರತಿಪಾದಿಸುವುದು ನಮ್ಮ ಸಂಸ್ಕೃತಿಯ ವೈಶಿಷ್ಟ್ಯ. ಅದನ್ನು ಸಮರ್ಥನೀಯವಾಗಿ ಪ್ರತಿಪಾದಿಸಿದ ಷಣ್ಮುಖ ಸ್ವಾಮಿಯವರು -

*"ಸೋಹಂ ಎಂದಡೆ ಅಂತರಂಗದ ಗರ್ವ, ಶಿವೋಹಂ ಎಂದಡೆ ಬಹಿರಂಗದ ಅಹಂಕಾರ, ಈ ಉಭಯವನಳಿದು ದಾಸೋಹಂ ಭಾವವನೆ ಕರುಣಿಸಿ ಬದುಕಿಸಯ್ಯ ಅಖಂಡೇಶ್ವರಾ"* ಎಂದಿದ್ದಾರೆ.

ಶರಣರ ದಾಸೋಹ ಸಂಸ್ಕೃತಿಯಲ್ಲಿ ಕೊಡುವವದು ಹಿರಿಯನು ಪಡೆವವನು ಕಿರಿಯನೆಂಬ ಭಾವನೆಗೆ ಅವಕಾಶವಿಲ್ಲ. ದಾಸೋಹದಲ್ಲಿ ಭಗವಂತನಿಗೆ ಅರ್ಪಿಸುವೆನೆಂಬ ಪೂಜ್ಯ ಭಾವನೆಯಿದೆ. ಅದರಂತೆ ಸ್ವೀಕರಿಸುವವನೂ ಸಹ ತಾನು ಹಿರಿಯನೆಂಬ ಅಹಂಭಾವನೆಗೆ ಅವಕಾಶವಿಲ್ಲ. ಅದನ್ನು ಪ್ರಸಾದ ಅಂದರೆ ಭಗವಂತನ ಕೃಪೆಯಿಂದ ದೊರೆತದ್ದು ಎಂಬ ಪವಿತ್ರ ಭಾವನೆಯಿರುತ್ತದೆ. ಇದು ಅನ್ನದಾನದ ವೈಶಿಷ್ಟ್ಯ. ಇದು ಮಾನವ ತನ್ನ ಜೀವನದಲ್ಲಿ ಗಳಿಸುವ ಪುಣ್ಯ ಸಂಪತ್ತು. ಇಂತಹ ಸಂಪತ್ತನ್ನು ಗಳಿಸುವುದಕ್ಕಾಗಿ ಮನೆಗಳಲ್ಲಿ ನಡೆಯುವ, ವಿವಾಹ, ಜನ್ಮದಿನೋತ್ಸವ, ಹಬ್ಬ ಹರಿದಿನಗಳಲ್ಲಿ, ಮೃತರ ಆತ್ಮ ಶಾಂತಿಗಾಗಿ ನಡೆಸುವ ಸಮಾರಾಧನೆಗಳಲ್ಲಿ ಸಹ ಅನ್ನದಾನ ನಡೆಯುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ನಡೆಯುವ ಮೇಲ್ಕಂಡ ವ್ಯವಹಾರಗಳಲ್ಲಿ ದಾಸೋಹ ಮತ್ತು ಪ್ರಸಾದ ಭಾವನೆಗಳು ಮಾಯವಾಗಿವೆ. ಕೆಲವರಿಗೆ ತಮ್ಮ ಶ್ರೀಮಂತಿಕೆಯ ಪ್ರದರ್ಶನವಾದರೆ ಸಾಮಾನ್ಯರಿಗೆ ಶ್ರೀಮಂತರಂತೆ ತೋರಿ ಕೊಳ್ಳುವ ಹಂಬಲವಾಗಿ ಪರಿಣಮಿಸಿದೆ.

ಭಾರತೀಯ ಸಂಸ್ಕೃತಿಯಲ್ಲಿ ಹಿಂದೆ ರೈತ ತಾನು ಬೆಳೆದ ಬೆಳೆಯಲ್ಲಿ ಸ್ವಲ್ಪ ಭಾಗವನ್ನು ಮೊದಲು ಮಠಗಳಿಗೆ ಅರ್ಪಿಸುತ್ತಿದ್ದ. ಅದರಿಂದ ಪ್ರತಿ ಗ್ರಾಮದಲ್ಲಿ ಮಠಗಳು ಇರುತ್ತಿದ್ದವು. ಅಲ್ಲಿ ಆಗಂತುಕರಿಗೆ, ಅನಾಥರಿಗೆ, ಅಶಕ್ತರಿಗೆ ಅನ್ನದಾನ ನಡೆಯುತ್ತಿತ್ತು. ಮಠಗಳ ಘನ ಉದ್ದೇಶವೇ ದಾಸೋಹವಾಗಿತ್ತು, ಭಕ್ತರಿಂದ ಪಡೆದು ಸಮಾಜಕ್ಕೆ ನೀಡುವ ಕಾಯಕದಲ್ಲಿ ಮಠಗಳು ನಿರತವಾಗಿರಬೇಕೆಂಬುದೇ ಮಠಗಳ ಸ್ಥಾಪನೆಯ ಉದ್ದೇಶವಷ್ಟೇ ?

ಮೈಸೂರು ಜಿಲ್ಲೆಯಲ್ಲಿ ಒಂದು ಶತಮಾನದ ಹಿಂದೆ ಬಂದ ಶ್ರೀ ಗುರು ಮಲ್ಲೇಶ್ವರರ ಸಾಂಸ್ಕೃತಿಕ ಪರಂಪರೆಯೊಂದು ಬೆಳೆದು ಬಂದಿದೆ. ಪ್ರತಿಯೊಂದು ಹಳ್ಳಿಯಲ್ಲೂ ಭಿಕ್ಷದ ಮಠಗಳಿರುತ್ತವೆ. ಆಯಾ ಮಠದ ಶರಣರೊಬ್ಬರು ಸಕಾಲಕ್ಕೆ ಭಕ್ತರ ಮನೆಗೆ ಹೋಗಿ ಅವರು ಭಕ್ತಿಯಿಂದ ನೀಡಿದ ಆಹಾರವನ್ನು ಭಕ್ತರಿಗೆ ವಿನಿಯೋಗಿಸುವ ದಾಸೋಹ ಕಾಯಕ ಇಂದಿಗೂ ನಡೆಯುತ್ತಾ ಬಂದಿದೆ. ನೀಡುವವರು ಸಂತೋಷ ದಿಂದ ಪೂಜ್ಯಾಭಾವನೆಯಿಂದ ನೀಡುತ್ತಾರೆ. ದಾಸೋಹದ ಹಿನ್ನೆಲೆಯಲ್ಲಿರುವುದು ಮಾನವ ಅಗತ್ಯವಾಗಿ ಗಳಿಸಬೇಕಾದ





ಪುಣ್ಯ ಸಂಚಯ. ಅದಕ್ಕಾಗಿಯೇ ಜನರ ಮನೆಗಳಲ್ಲಿ ನಡೆಯುವ ಶುಭ ಕಾರ್ಯಗಳಲ್ಲಿ ಪಿತೃಪಿತಾಮಹರ ಸ್ಮರಣಾರ್ಥ ನಡೆಸುವ ಸಮಾರಾಧನೆಗಳಲ್ಲಿ ಅನ್ನದಾನವ ಮಾಡಿ ತೃಪ್ತಿಪಡೆಯುತ್ತಾರೆ. ಇಂದಿನ ನವನಾಗರಿಕ ಪರಿಸ್ಥಿತಿಯಲ್ಲಿ ತತ್ವಗಳ ಅರ್ಥವೇ ಬದಲಾವಣೆಯಾಗುತ್ತಿದೆ. ಅದರೂ ನಾವು ನಮ್ಮ ಸಂಸ್ಕೃತಿಯ ರಕ್ಷಣೆಗೆ ಶ್ರಮಿಸುವುದು ಅಗತ್ಯ. ಡಂಭಾಚಾರಕ್ಕಾಗಿ ವೆಚ್ಚ ಮಾಡುವುದನ್ನು ಬಿಟ್ಟು ಸದ್ವಿನಿಯೋಗವಾಗಿ ಸತ್ಫಲವನ್ನು ಪಡೆಯಬೇಕು.

ಇಂತಹ ಕಾರ್ಯಕ್ಕಾಗಿ ಅನೇಕ ಮಠಗಳಲ್ಲಿ ವ್ಯವಸ್ಥಿತ ಕಾರ್ಯಗಳು ನಡೆಯುತ್ತಿವೆ. *ತುಮಕೂರು ಜಿಲ್ಲೆಯ ಶ್ರೀ ಸಿದ್ಧಗಂಗಾ ಮಠದಲ್ಲಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ತಮಿಳುನಾಡು ಪ್ರಾಂತ್ಯಗಳಿಂದ ಬಂದು ಅಧ್ಯಯನ ಮಾಡುವ ಮಕ್ಕಳ ಸಂಖ್ಯೆ ಎಂಟು ಸಾವಿರವನ್ನು ಮುಟ್ಟಿದೆ. ಇಲ್ಲಿ ಜಾತಿ ಮತ ಭೇದವಿಲ್ಲ. ಪ್ರತಿದಿನ ನೂರಾರು ಜನ ಮಕ್ಕಳ ಪೋಷಕರು, ಪ್ರವಾಸಿಗರು, ಶ್ರೀಕ್ಷೇತ್ರದ ಭಕ್ತರು ಆಗಮಿಸುತ್ತಾರೆ. ಅವರೆಲ್ಲ ರಿಗೆ ದಾಸೋಹ ನಡೆಯಬೇಕು. ಸ್ವಂತ ಆಸ್ತಿಯ ಬೆಂಬಲವಿಲ್ಲ ದಿದ್ದರೂ ಶ್ರೀಗಳವರ ಆತ್ಮಬಲ ಮತ್ತು ಭಕ್ತರ ಬೆಂಬಲದ ಮೇಲೆಯೇ ದಾಸೋಹ ನಡೆಯುತ್ತಿದೆ. ಈ ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳುವ ಅಪೂರ್ವ ಅವಕಾಶವನ್ನು ಶ್ರೀಗಳವರು ಅನುಗ್ರಹಿಸಿದ್ದಾರೆ. ಹಿರಿಯ ವಿದ್ಯಾರ್ಥಿಗಳ ಸಂಘ ಕಾರ್ಯವೊಂದನ್ನು ನಿಯೋಜಿಸಿದೆ. ಅದಕ್ಕಾಗಿ ನಾವು ಅಭಿನಂದಿಸಬೇಕು. ಈ ಯೋಜನೆಯಂತೆ ಯಾರಾದರೂ ತಮ್ಮ ಜನ್ಮ ದಿನದ ಸ್ಮರಣೆ, ಮಕ್ಕಳ ಜನ್ಮದಿನದ ಸ್ಮರಣೆ, ಮಕ್ಕಳ ವಿವಾಹಾದಿ ಶುಭಕಾರ್ಯಗಳ ಸ್ಮರಣೆ, ಪಿತೃಗಳ ಪಿತಾಮಹರ ಸ್ಮರಣೆ, ಪತಿ ಪತ್ನಿಯವರ ಸ್ಮರಣಾರ್ಥ ನಿರಂತರ ದಾಸೋಹ ನಡೆಯುವಂತೆ ವ್ಯವಸ್ಥೆ ಮಾಡಲು ಅವಕಾಶವಿದೆ. ಪುಣ್ಯಫಲಾಪೇಕ್ಷಿಗಳಾದ ಮಹನೀಯರು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಧನ್ಯರಾಗಬೇಕು.*

***ಯೋಜನೆಯ ವಿವರಣೆ***

ಈ ಯೋಜನೆಯಂತೆ ಮಹನೀಯರು ಕೊನೆಯ ಪಕ್ಷ ಎರಡು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹ ನಿಧಿಗೆ ಅರ್ಪಿಸಿದರೆ ಅದನ್ನು ಶಾಶ್ವತ ನಿಧಿಯಾಗಿಟ್ಟು (Fixed Deposit) ಅದರ ಬಡ್ಡಿ ಹಣವನ್ನು ಮಾತ್ರ ದಾಸೋಹಕ್ಕೆ ಬಳಸಲಾಗುತ್ತದೆ. ತಾವು ಅಪೇಕ್ಷಿಸಿದ ದಿನ ಅವರ ಹೆಸರಿನಲ್ಲಿ ಶ್ರೀಕ್ಷೇತ್ರದ ಸ್ವಾಮಿಯ ಸನ್ನಿಧಿಯಲ್ಲಿ ಆ ದಿನ ಅವರ ಹೆಸರಿನಲ್ಲಿ ಸಂಕಲ್ಪ ಮಾಡಿ ಅವರಿಗೆ ಶ್ರೇಯಸ್ಸನ್ನು ಪ್ರಾರ್ಥಿಸಿ ದಾಸೋಹ ಸೇವೆ ನಡೆಸಲಾಗುವುದು. ಪ್ರತಿ ವರ್ಷ ಅವರು ಬಯಸಿದ್ದ ದಾಸೋಹ ಸೇವೆಯ ಮುನ್ಸೂಚನೆಯನ್ನು ದಾನಿಗಳಿಗೆ ವಿನಂತಿಸಲಾಗುವುದು. ಅಪೇಕ್ಷೆಯಿರುವವರು ಆ ದಿನ ಶ್ರೀ ಕ್ಷೇತ್ರಕ್ಕೆ ಆಗಮಿಸಿ ಶ್ರೀ ಗುರು ಕೃಪೆ ಪಡೆದು ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳಬಹುದು. ಅವರು ಬರಲಿ ಬಾರದಿರಲಿ, ಪ್ರತಿವರ್ಷ ಬರುವ ಬಡ್ಡಿ ಹಣದಿಂದ ಅವರ ಹೆಸರಿನಲ್ಲಿ ನಿರಂತರವಾಗಿ ಈ ಸೇವೆ ಸಲ್ಲಿಸುವ ವ್ಯವಸ್ಥೆ ಮಾಡಿದೆ. ಅವರು ಬರಲಾಗದಿದ್ದರೆ ಅವರಿಗೆ ಶ್ರೀ ಗುರು ಕೃಪೆಯಿಂದ ಆಶೀರ್ವಾದ ಪ್ರಸಾದವನ್ನು ಅಂಚೆ ಮೂಲಕ ಕಳುಹಿಸಲಾಗು ವುದು. ನಾವು ಸಲ್ಲಿಸುವ ಸೇವೆ ಅಲ್ಪವಾಗಬಹುದು. ನಾವು ನೀಡುವ ಮೊತ್ತದ ಪ್ರತಿಫಲ ಅಲ್ಪವಾಗಬಹುದು. ಆದರೆ ಕೊನೆಯ ಪಕ್ಷ ೫-೧೦ ಮಕ್ಕಳಿಗಾದರೂ ನಿರಂತರವಾಗಿ ಒಂದು ಹೊತ್ತಿನ ಪ್ರಸಾದ ವಿನಿಯೋಗವಾಗುತ್ತದೆ. ಮಕ್ಕಳು ಅಪ್ರತ್ಯಕ್ಷವಾಗಿ ನಮ್ಮನ್ನು ಹರಸುತ್ತಾರೆ. ದಾನಿಗಳ ಹೆಸರನ್ನು ಪ್ರತಿ ತಿಂಗಳು ಸಿದ್ಧಗಂಗಾ ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ. ನಾವು ನಮ್ಮ ಹುಟ್ಟಿದ ದಿನವನ್ನು, ನಮ್ಮ ಮಕ್ಕಳು ಲಗ್ನವಾದ ದಿನವನ್ನು, ನಮ್ಮ ಮಾತಾಪಿತೃಗಳು ಇಹಲೋಕ ಬಿಟ್ಟ ದಿನವನ್ನು ನಾವೇ ಮರೆತು ಬಿಡುತ್ತೇವೆ. ನಮ್ಮ ಕಾಲಾನಂತರ ನಮ್ಮ ಮಕ್ಕಳು, ಮೊಮ್ಮಕ್ಕಳು, ಅದನ್ನು ಸ್ಮರಿಸಲಾರರು. ಆದುದರಿಂದ ಶ್ರೀಕ್ಷೇತ್ರದ ಈ ಸೇವೆಯಲ್ಲಿ ಪಾಲ್ಗೊಂಡರೆ ನಮ್ಮ ವಂಶ ಪಾರಂಪರ್ಯವಾಗಿ ಪಾಲ್ಗೊಂಡರೆ ನಮ್ಮ ಅಪೇಕ್ಷಿತ ದಾಸೋಹ ಸೇವೆ ನಡೆಯುವುದಲ್ಲದೆ ಅದನ್ನು ನಮ್ಮ ಸ್ಮರಣೆಗೆ ತರುವ ಕಾರ್ಯ ಈ ಯೋಜನೆಯಲ್ಲಿದೆ. ಅಪೇಕ್ಷಿಸಿದ ಮೊತ್ತ ಒಬ್ಬರ ಜೀವನದಲ್ಲಿ ಅಧಿಕವಲ್ಲ. ಅರ್ಪಿತ ಹಣವು ವ್ಯರ್ಥವಲ್ಲ. ಆದರೆ ಅದರ ಫಲ ನಿರಂತರ ಲಭ್ಯ. ಅದರಿಂದ ಹತ್ತಾರು ಮಕ್ಕಳ ಅಭ್ಯುದಯ, ಸಮಾಜದ ಉನ್ನತಿಗೆ ನಮ್ಮ ಅಲ್ಪಕಾಣಿಕೆ. ಅದು ಅಲ್ಪವಾದರೂ ಸಫಲ, ಸದ್ವಿನಿಯೋಗ. ಇಂತಹ ಯೋಜನೆ ಯಲ್ಲಿ ಪಾಲ್ಗೊಳ್ಳುವ ಭಾಗ್ಯ ಸರ್ವರಿಗೂ ಲಭ್ಯವಾಗಲೆಂದು ಬಯಸುವ, ಇಂತಹ ಯೋಜನೆಗೆ ಅನುಮತಿ ನೀಡಿದ ಮಹಾಯೋಗೀಶ್ವರರಾದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಚರಣಾರವಿಂದಕ್ಕೆ ಪ್ರಣಾಮಗಳು. ಈ ಯೋಜನೆಯನ್ನು ಕಾರ್ಯಗತಗೊಳಿಸಲು ಪ್ರಾಮಾಣಿಕ ಪ್ರಯತ್ನ ನಡೆಸುತ್ತಿರುವ ಹಿರಿಯ ವಿದ್ಯಾರ್ಥಿ ಸಂಘಕ್ಕೆ ಅಭಿನಂದನೆಗಳು.

*

## ಅಭಿನಂದನೆ



**ಕೇಂ**ದ್ರ ಸರ್ಕಾರವು ೨೦೦೧ನೇ ಸಾಲಿನ ''ಕೋಮು ಸೌಹಾರ್ದ ಪ್ರಶಸ್ತಿ''ಯನ್ನು ಗದಗ-ಡಂಬಳ ಸಂಸ್ಥಾನ ಮಠದ ಶ್ರೀ ತೋಂಟದ ಸಿದ್ಧಲಿಂಗಸ್ವಾಮಿಗಳಿಗೆ ನೀಡಿ ಗೌರವಿಸಿದ ಶುಭಸುದ್ಧಿಯಿಂದ 'ಸಿದ್ಧಗಂಗಾ' ಸಂತೋಷಿಸುತ್ತದೆ. ಪೂಜ್ಯ ಶ್ರೀಗಳನ್ನು ಭಕ್ತಿಶ್ರದ್ಧೆಗಳಿಂದ ಅಭಿನಂದಿಸುತ್ತದೆ.

ಬಸವಣ್ಣನವರ ಭಕ್ತಿ ಪಥದಲ್ಲಿ ನಡೆದಿರುವ ಶ್ರೀಗಳು ಕಾಯಕ-ದಾಸೋಹ ತತ್ವಾನುಯಾಯಿಗಳು. ಪ್ರಗತಿಶೀಲ ವಿಚಾರಧಾರೆಯನ್ನು ಒಪ್ಪಿ ಆಚರಣೆಯಲ್ಲಿ ತಂದಿರುವಂಥವರು ಗ್ರಂಥದಾಸೋಹದ ಮೂಲಕ ಬಸವಾದಿ ಶರಣರ ಜೀವನ ಸಿದ್ಧಾಂತವನ್ನು ಪ್ರಚುರಪಡಿಸುತ್ತಿರುವವರು. ಕೃಷಿಕೃತ್ಯ ಕಾಯಕದ ಸುಸಂಸ್ಕೃತರು. ಪ್ರವಚನ ಪವಿತ್ರ ಜ್ಯೋತಿ ಸ್ವರೂಪರು. ''ಲೋಕವಿರೋಧಿ ಶರಣ ನಾರಿಗಂಜ''ನೆಂಬ ಬಸವಣ್ಣರ ದಿಟ್ಟನುಡಿ, ಧೀರ ಹೆಜ್ಜೆ'' – ಭಾಷ್ಯವಾಗಿರುವವರು. ಧರ್ಮ ಸಮನ್ವಯದ ಹರಿಕಾರರು. 'ಎಡೆಯೂರು ಸಿದ್ಧಲಿಂಗ ಶಿವಯೋಗಿಗಳ ರಾಜತೇಜದಲ್ಲಿ ಬೆಳಗುತ್ತಿರುವ– ''ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಗದಗ-ಡಂಬಳ ಶ್ರೀ ತೋಂಟದಾರ್ಯ ಸಂಸ್ಥಾನ ಮಠಕ್ಕೆ ಹೊಸ ಆಯಾಮವನ್ನು ತಂದು ಜನಮನದಲ್ಲಿ ಪೂಜ್ಯರಾಗಿರುವುದು ಸಮಾಜದ ಪುಣ್ಯ. ನಾಡಿನ ಭಾಗ್ಯ.

ಪೂಜ್ಯರಿಗೆ ಸಂದಿರುವ 'ಕೋಮು ಸೌಹಾರ್ದ ಪ್ರಶಸ್ತಿ' ಮಾಠಾಧಿಪತಿಗಳ ವರ್ಗಕ್ಕೇ ಸಂದಿರುವುದಾಗಿದೆ. ಶ್ರೀಗಳವರಿಗೆ ಈ ಶುಭ ಸಂದರ್ಭದಲ್ಲಿ ''ಸಿದ್ಧಗಂಗಾ'' ತುಂಬು ಹೃದಯದ ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತದೆ.

ಪ್ರಸಿದ್ಧ ಹಿಂದೂಸ್ಥಾನಿ ಗಾಯಕಿ ಗಂಗೂಬಾಯಿ ಹಾನಗಲ್ ಅವರಿಗೆ ''ಪದ್ಮಭೂಷಣ'' ಪ್ರಶಸ್ತಿ ಸಂದಿರುವ ಈ ಸರಳ ಜೀವನ ತೇಜಸ್ವಿನಿ, ವಿನಯ ಸೌಜನ್ಯಗಳ ಮಾತೃಸ್ವರೂಪಿಣಿ, ''ಗಾಯನ ಸಾಮ್ರಾಜ್ಞಿ'' ಗಂಗಾಬಾಯಿ ಹಾನಗಲ್ ಅವರಿಗೂ ಅಭಿನಂದನೆಗಳನ್ನು ಸಲ್ಲಿಸಲು 'ಸಿದ್ಧಗಂಗಾ' ಸಂತೋಷಿಸುತ್ತದೆ.

## ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ – ೨೦೦೨

ಶ್ರೀ ಸಿದ್ಧಗಂಗಾ ಮಠ, ತುಮಕೂರು – ೫೭೨ ೧೦೪

ದಿನಾಂಕ : ೧-೩-೨೦೦೨ ರಿಂದ ೧೬-೩-೨೦೦೨



**ಕ**ರ್ನಾಟಕದಲ್ಲಿ ನಡೆಯುವ ದನಗಳ ಬೃಹತ್ ಜಾತ್ರೆಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಯವ ಶ್ರೀ ಸಿದ್ದಲಿಂಗೇಶ್ವರ ಸ್ವಾಮಿ ದನಗಳ ಜಾತ್ರೆಯೂ ಒಂದಾಗಿದೆ. ಪ್ರತಿ ವರ್ಷ ಇದು ಮಹಾಶಿವರಾತ್ರಿ ಸಂದರ್ಭದಲ್ಲಿ ನಡೆಯುತ್ತದೆ. ಈ ಜಾತ್ರೆಯ ಅಂಗವಾಗಿ ೩೮ ವರ್ಷಗಳಿಂದಲೂ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ವ್ಯವಸ್ಥೆ ಮಾಡುತ್ತಾ ಬಂದಿದ್ದೇವೆ. ಜಾತ್ರೆಯ ಸಮಯದಲ್ಲಿ ಸುಮಾರು ೩. ಲಕ್ಷಕ್ಕೂ ಹೆಚ್ಚು ಯಾತ್ರಾರ್ಥಿಗಳು ಶ್ರೀಕ್ಷೇತ್ರಕ್ಕೆ ಆಗಮಿಸುತ್ತಾರೆ. ಇವರಲ್ಲಿ ಬಹುತೇಕ ಮಂದಿ ಗ್ರಾಮಾಂತರ ಪ್ರದೇಶಗಳಿಂದ ಬಂದವರೇ ಆಗಿರುತ್ತಾರೆ. ಪ್ರತಿ ವರ್ಷವೂ ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳು, ಕೇಂದ್ರ ಸರ್ಕಾರದ ಕೆಲವು ಇಲಾಖೆಗಳು ಮತ್ತು ಖಾಸಗಿ ಸಂಸ್ಥೆಗಳು ತಮ್ಮ ಇಲಾಖಾ/ಸಂಸ್ಥೆಯ ಮಳಿಗೆಗಳನ್ನು ವಸ್ತುಪ್ರದರ್ಶನದಲ್ಲಿ ತೆರೆದು ತಮ್ಮಲ್ಲಿ ಉಂಟಾಗುವ ಪ್ರಗತಿಪರ ಕಾರ್ಯಗಳನ್ನು ಮತ್ತು ಸಾಧನೆಗಳನ್ನು ವಸ್ತು ಪ್ರದರ್ಶನಕ್ಕೆ ಆಗಮಿಸುವ ಜನರಿಗೆ ಸಾದರ ಪಡಿಸುತ್ತಿದ್ದಾರೆ. ವಸ್ತುಪ್ರದರ್ಶನದಲ್ಲಿ ನಿತ್ಯಬಳಕೆಯ ವಸ್ತುಗಳ ಪ್ರದರ್ಶನ ಮತ್ತು ಮಾರಾಟಕ್ಕೆ ಅವಕಾಶವಿದೆ.

**ಮಳಿಗೆಗಳನ್ನು ತೆರೆಯಲು ಅಪೇಕ್ಷೆ ಉಳ್ಳವರು ಕೂಡಲೇ ಕಾರ್ಯದರ್ಶಿಯವರನ್ನು ಸಂಪರ್ಕಿಸಿ :**

ದೂರವಾಣಿ : ೨೮೨೦೨೮, ೨೦೨೫೧೧





# ಆಯ್ದಕ್ಕಿ ಮಾರಯ್ಯನ ಒಂದು ವಚನ

– ಎಚ್.ಎಸ್. ಸಿದ್ಧಗಂಗಪ್ಪ
*೫೩/೧, ೩ನೇ ಅಡ್ಡರಸ್ತೆ,*
*ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ*
*ವಿಜಯನಗರ, ಬೆಂಗಳೂರು – ೫೬೦ ೦೪೦.*

*''ಕಾಯಕದಲ್ಲಿ ನಿರತನಾದರೆ*
*ಗುರುದರ್ಶನವಾದಡೂ ಮರೆಯಬೇಕು*
*ಲಿಂಗಪೂಜೆಯಾದಡೂ ಮರೆಯಬೇಕು*
*ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು*
*ಕಾಯಕವೇ ಕೈಲಾಸವಾದ ಕಾರಣ*
*ಅಮರೇಶ್ವರ ಲಿಂಗಾವಾಯಿತ್ತಾದಡೂ ಕಾಯಕದೊಳಗು''*

ಈ ವಚನ ಹೊರನೋಟಕ್ಕೆ ಬಹಳ ಚಿಕ್ಕದು, ಮತ್ತು ಒಂದು ರೀತಿಯಲ್ಲಿ ವಾಸ್ತವತೆಯಿಂದ ಕೂಡಿದ್ದು. ಅದರೆ ಅದನ್ನು ಕುರಿತು ಆಳವಾದ ಚಿಂತನೆಗೆ ತೊಡಗಿಸಿದರೆ ಅದು ತಾತ್ವಿಕವಾಗಿ, ಸಾಮಾಜಿಕವಾಗಿ ಮತ್ತು ಅನುಭಾವಿಕವಾಗಿಯೂ ಕೂಡ ಬಹಳ ದೂರ ನಮ್ಮನ್ನು ಕರೆದೊಯ್ಯುತ್ತದೆ.

ಅದರ ವಿಶ್ಲೇಷಣೆಗೆ ತೊಡಗುವ ಮುನ್ನ ಆಯ್ದಕ್ಕಿ ಮಾರಯ್ಯ ಮತ್ತು ಆಯ್ದಕ್ಕಿ ಲಕ್ಕಮ್ಮ ಅವರ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯಕ. ಮಾರಯ್ಯ ಮತ್ತು ಲಕ್ಕಮ್ಮ ದಂಪತಿಗಳು ಮೂಲತಃ ರಾಯಚೂರು ಜಿಲ್ಲೆಯ ಅಮರೇಶ್ವರ ಗ್ರಾಮದವರು. ಇವರು ಸ್ವಗ್ರಾಮವನ್ನು ತೊರೆದು ಕಲ್ಯಾಣಕ್ಕೆ ಬಂದುದಕ್ಕೆ ಎರಡು ಮುಖ್ಯವಾದ ಕಾರಣಗಳಿರುವಂತೆ ತೋರುತ್ತದೆ. ಮೊದಲನೆಯದಾಗಿ ಅವರ ಬಡತನ. ಎರಡನೆಯದಾಗಿ ಆ ಕಾಲದಲ್ಲಿ ಕಲ್ಯಾಣದಲ್ಲಿ ನಿರಂತರವಾಗಿ ತಾತ್ವಿಕ ಸಂಘಟನಾತ್ಮಕವಾಗಿ ಜರುಗುತ್ತಿದ್ದ ಶರಣರ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳು ಬಹುವಾಗಿ ಆಕರ್ಷಿಸಿದವು. ಈ ದಂಪತಿಗಳಿಬ್ಬರೂ ವಚನಕಾರರು. ಮಾರಯ್ಯನ ವಚನಾಂಕಿತ 'ಅಮರೇಶ್ವರಲಿಂಗ'ವಾದರೆ, ಲಕ್ಕಮ್ಮನ ವಚನಾಕಿಂತ 'ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ'ವಾಗಿದೆ.

ಈ ಶರಣ ದಂಪತಿಗಳ ಹೆಸರಿನೊಡನೆ ಸೇರಿಕೊಂಡಿರುವ 'ಅಕ್ಕಿ' ಅಥವಾ 'ಆಯ್ದಕ್ಕಿ' ಇವರ ಶರಣ ದಾಂಪತ್ಯ ಜೀವನವನ್ನೇ ರೂಪಿಸಿದ 'ಬೀಜ' ಶಕ್ತಿಯ ವಸ್ತುವೆನಿಸಿದೆ ಈ ವಸ್ತು. 'ಅಕ್ಕಿ' ಮತ್ತು ಅದರಿಂದ ಉಂಟಾದ ಒಂದು ಪವಾಡ ಹೇಗೆ ಅವರ ಇಡೀ ಜೀವನದ ಸುತ್ತ ಹರಡಿಕೊಂಡಿದೆ ಎಂದರೆ, ಈ ದಂಪತಿಗಳ ಹೆಸರು ಆರಂಭವಾಗುವುದು ಅಕ್ಕಿಯಿಂದ. ಇವರ ಅಕ್ಕಿಯ ಪವಾಡವನ್ನು ಹಲವಾರು ಕಾವ್ಯಪುರಾಣಗಳು ಪೂಜ್ಯಭಾವನೆಯಿಂದ ಸ್ಮರಿಸಿ ಕೊಂಡಿರುವುದನ್ನು ಕಾಣಬಹುದಾಗಿದೆ.

ರಾಯಚೂರಿನ ಅಮರೇಶ್ವರದಿಂದ ಕಲ್ಯಾಣಕ್ಕೆ ಬಂದ ಈ ದಂಪತಿಗಳು ಅಲ್ಲಿನ ಅಂಗಡಿ ಬೀದಿಗಳಲ್ಲಿ; ಮುಖ್ಯವಾಗಿ ಶಿವಭಕ್ತರ ಮನೆಗಳ ಸುತ್ತಲೂ ಚೆಲ್ಲಿದ ಅಕ್ಕಿಯನ್ನು ಆಯ್ದು ತಂದು ಅದರಿಂದ ಮೊದಲು ಜಂಗಮ ದಾಸೋಹವನ್ನು ಮಾಡಿ; ಉಳಿದಿದ್ದರಲ್ಲಿ ಜೀವನ ನಡೆಸುತ್ತಿದ್ದರು. ಈ ರೀತಿಯ ಅವರ ಜೀವನ ಕಾಲಚಕ್ರದೊಡನೆ ಸುತ್ತುತ್ತಿತ್ತು. ಅವರಿಗೆ ಶಿವನಿಷ್ಠೆ ಮತ್ತು ಜಂಗಮ ದಾಸೋಹ ಮುಖ್ಯ ವಾಗಿತ್ತೇ ಹೊರತು ಬಡತನ ಅವರಿಗೆ ಸಮಸ್ಯೆಯಾಗಿ ಕಾಣಲಿಲ್ಲ ವೆಂಬುದು ಒಂದು ಘಟನೆಯಿಂದ ದೃಢಪಡುತ್ತದೆ.

ಆಯ್ದಕ್ಕಿ ದಂಪತಿಗಳ ಕಾಯಕ ನಿಷ್ಠೆಯನ್ನು, ಅವರ ಬದುಕಿರುವ ದಾರಿದ್ರ್ಯವನ್ನು ಮನಗಂಡ ಬಸವಣ್ಣ; ಮಾರಯ್ಯ ಅಕ್ಕಿಯನ್ನು ಆಯುತ್ತಿದ್ದ ಹಾದಿಯಲ್ಲಿ ಬೇಕಾದಷ್ಟು ಅಕ್ಕಿಯನ್ನು ಚೆಲ್ಲಿದ. ಇದರಿಂದಾಗಿ ಮಾರಯ್ಯನು ಮೂರು ದಿನಗಳಿಗಾಗುವ ಅಕ್ಕಿಯನ್ನು ಒಂದೇ ದಿನದಲ್ಲಿ ಆಯ್ದು ಮನೆಗೆ ತಂದ. ಇದರಿಂದ ಸ್ವಾಭಾವಿಕವಾಗಿಯೇ ಆಶ್ಚರ್ಯಗೊಂಡ ಲಕ್ಕಮ್ಮ; ಇಷ್ಟು ಅಕ್ಕಿಯನ್ನು ಆಯ್ದುತರಲು ಹೇಗೆ ಸಾಧ್ಯವೆಂದು ಪ್ರಶ್ನಿಸಿ; ಇದರ ಹಿಂದಿನ ಕಾರಣವನ್ನು ಅರಿತು ''ಬಸವಣ್ಣನ ಮನೆಯಲ್ಲಿರುವ ಒಂದು ಲಕ್ಷದ ತೊಂಬತ್ತಾರು ಸಾವಿರ ಶರಣರನ್ನು ತಮ್ಮ ಮನೆಗೆ ದಾಸೋಹಕ್ಕಾಗಿ ಕಳುಹಿಸಿಕೊಡಬೇಕೆಂದು'' ಬಸವಣ್ಣನನ್ನು ಬಿನ್ನವಿಸಿಕೊಳ್ಳಲು ಮಾರಯ್ಯನನ್ನು ಕಳುಹಿಸಿದಳು. ಮಾರಯ್ಯ ತನ್ನ ಹೆಂಡತಿ ಹೇಳಿದಂತೆ ಮಾಡಿದ. ಆಕೆ ಅಂದು ಗಂಡ ಆಯ್ದು ತಂದ ಒಂದು ದಿನದ ಅಕ್ಕಿಯಿಂದಲೇ ಬಗೆ ಬಗೆಯ ಭಕ್ಷ್ಯಭೋಜ್ಯಾದಿಗಳನ್ನೆಲ್ಲ ಮಾಡಿ ಬಸವಣ್ಣನು ಕಳುಹಿಸಿದ ಒಂದು ಲಕ್ಷದ ತೊಂಬತ್ತಾರು ಸಾವಿರ ಶರಣರಿಗೆ ಉಣ ಬಡಿಸಿದಳೆಂದು ಕಥೆಯೊಂದರಿಂದ ತಿಳಿದು ಬರುತ್ತದೆ.

ಲಕ್ಕಮ್ಮ ದಂಪತಿಗಳು ಒಂದು ಲಕ್ಷದ ತೊಂಬತ್ತಾರು ಸಾವಿರ ಜಂಗಮರಿಗೆ ದಾಸೋಹ ಸೇವೆಯನ್ನು ಮಾಡಿದರು ಎಂಬುದಾಗಲಿ, ಅಥವಾ ಆಯ್ದು ತಂದ ಒಂದು ಹಿಡಿ ಅಕ್ಕಿಯಿಂದಲೇ ಬಗೆ ಬಗೆಯ ಭಕ್ಷ್ಯ ಭೋಜ್ಯಾದಿಗಳನ್ನೆಲ್ಲಾ ಮಾಡಿದಳು ಎಂಬುದಾಗಲಿ ಮಹತ್ವದ ವಿಷಯವೆನಿಸುವುದಿಲ್ಲ. ಆ ಶರಣ ದಂಪತಿಗಳು ತಮ್ಮ ನಿಷ್ಠೆಯ ಬದುಕಿನಲ್ಲಿ ಉಂಟಾದ ಬಡತನವನ್ನು ಅವರು ಎದುರಿಸಿದ

ದಿಟ್ಟತನವನ್ನು; ಬಸವಣ್ಣನ ಶ್ರೀಮಂತಿಕೆಗೆ ಸೊಪ್ಪು ಹಾಕದೆ ಅವರು ಮೆರೆದ ಶಿವತತ್ವದ ಸ್ವಾಭಿಮಾನವನ್ನು ಇಲ್ಲಿ ಮುಖ್ಯವಾಗಿ ಗ್ರಹಿಸ ಬೇಕಾಗುತ್ತದೆ.

ಆಯ್ದಕ್ಕಿ ಮಾರಯ್ಯನ ಈ ವಚನ ಕಾಯಕದ ಮಹತ್ವವನ್ನು ತಿಳಿಸುತ್ತದೆ. ೧೨ನೇ ಶತಮಾನದಲ್ಲಿ ಬಸವಾದಿ ಶರಣರು ರೂಪಿಸಿದ ಮುಖ್ಯವಾದ ತತ್ವ ಕಾಯಕ. ಈ ಮಾತಿನಲ್ಲಿ ಶರಣರು ಕಂಡ ಆದರ್ಶ ಮತ್ತು ಆಚರಣೆಯಿಂದ ತುಂಬಿದ ಅರ್ಥವ್ಯಾಪ್ತಿ ಇಡೀ ವಿಶ್ವವನ್ನೇ ಒಳಗೊಳ್ಳುವಂತಹದು. 'ಕಾಯಕ' ಎಂಬ ಮಾತೇ ಶರಣರು ವಿಚಾರ ಪ್ರಪಂಚಕ್ಕೆ ಕೊಟ್ಟು ವಿಶಿಷ್ಟವಾದ ಕಾಣಿಕೆ ಎನ್ನಬಹುದು. ಈ ಮಾತು ಹೊಟ್ಟೆಯಪಾಡಿಗಾಗಿ ಕೈಗೊಂಡ ಉದ್ಯೋಗ ಎಂದಷ್ಟೇ ಅರ್ಥವನ್ನು ಒಳಗೊಂಡಿಲ್ಲ, ಪ್ರತಿಯೊಬ್ಬರೂ ತಮ್ಮ ಜೀವನ ನಿರ್ವಹಣೆಗಾಗಿ ಉದ್ಯೋಗವನ್ನು ಕೈಗೊಳ್ಳ ಬೇಕಾದುದು ಅವಶ್ಯಕ. ಇನ್ನೊಬ್ಬರ ದುಡಿಮೆಯನ್ನು ಕುಳಿತು ತಿನ್ನುವ ಹಕ್ಕು ನಮಗಿಲ್ಲ, ನಮ್ಮ ದೇಹಶ್ರಮದಿಂದಲೇ ನಮ್ಮ ಬದುಕು ನಡೆಯಬೇಕು. ಆದರೆ 'ಕಾಯಕ' ಎಂಬುದರ ಅರ್ಥ ಇಷ್ಟೇ ಅಲ್ಲ; ಇನ್ನು ವ್ಯಾಪಕವಾದುದು. ತಾನು ಕೈಗೊಂಡ ಉದ್ಯೋಗ ಸಮಾಜಕ್ಕೆ ಹಾನಿಕಾರವಾಗಬಾರದು. ಸಮಾಜದ ಅವಶ್ಯಕತೆಗಳನ್ನು ಪೂರೈಸು ವಂತಿರಬೇಕು. ಆದರ ಫಲ ತನಗೆ ಮಾತ್ರವಲ್ಲದೆ ಸಮಾಜಕ್ಕೆ ದೊರೆಯಬೇಕು ಎಂಬುದಕ್ಕೆ ಶರಣರು ಮಹತ್ವವನ್ನು ಕೊಟ್ಟರು.

ಸಾಮಾಜಿಕ ಮತ್ತು ವೈಯಕ್ತಿಕ ಜೀವನದ ಸ್ವಯಂ ಪೂರ್ಣತೆಯನ್ನು ಕಾಯಕತತ್ವ ಒಳಗೊಳ್ಳುತ್ತದೆ. ವ್ಯಕ್ತಿ ಈ ಸಮಾಜದಲ್ಲಿ ಚೆನ್ನಾಗಿ ಬಾಳಬೇಕು, ಚೆನ್ನಾಗಿ ಬದುಕಬೇಕು. ಚೆನ್ನಾಗಿ ದುಡಿಯಬೇಕು. ಆದರೆ ಆ ದುಡಿಮೆಯ ಫಲ ತನಗೆ ಮಾತ್ರವೆಂಬ ಸ್ವಾರ್ಥ ಇರಬಾರದು. ಇದ್ದರೂ ಕಡಿಮೆ ಪ್ರಮಾಣದಲ್ಲಿರಬೇಕು. ತನಗೆ ತಾನು ಮಾತ್ರ ಬದುಕದೆ ಸಮಾಜಕ್ಕಾಗಿಯೂ ಸ್ವಲ್ಪಮಟ್ಟಿಗೆ ಬದುಕುವುದನ್ನು ಕಲಿಯ ಬೇಕು. ಲೋಕ ಜೀವನದಲ್ಲಿ ತಾನೊಬ್ಬ ನಮ್ರ ಸೇವಕನೆಂಬ ಭಾವನೆಯಿಂದ ದುಡಿದು, ದುಡಿಮೆಯ ಒಂದು ಭಾಗವನ್ನು ಸಮಾಜಕ್ಕಾಗಿ ವಿನಿಯೋಗಿಸಬೇಕು ಆಗ ತಾನು ಮಾಡುವ ದುಡಿಮೆಯು 'ಕಾಯಕ'ವಾಗುತ್ತದೆ.

ಕಾಯಕ ಶಬ್ದದ ಸಾಮಾನ್ಯ ಅರ್ಥ 'ಕೆಲಸ'. ಆದರೆ ವಚನಕಾರರ ಪರಿಭಾಷೆಯಲ್ಲಿ ಅದಕ್ಕೊಂದು ತಾಂತ್ರಿಕ ವಿಶೇಷಾರ್ಥವಿದೆ. ವೈಜ್ಞಾನಿಕ-ಆಧ್ಯಾತ್ಮಿಕ ಅರ್ಥವಿದೆ. 'ಕಾಯಕವೇ ಕೈಲಾಸ' ಎಂಬ ಶರಣ ಪದಬಂಧಧಕ್ಕೆ 'Work is workship' ಎನ್ನುವುದು ವಾಡಿಕೆಯ ಭಾಷಾಂತರ. ಅದು ಕೇವಲ ಆರಾಧನೆಯ ಮತ್ತು ನಮ್ಮ ಭೌತಿಕ ಅಗತ್ಯಗಳನ್ನು ಪೂರೈಸುವ ಸಾಧನವಲ್ಲ. 'ಕೈಲಾಸ' ಶಬ್ದ ಸಾಮಾನ್ಯ ಅರ್ಥದಲ್ಲಿ ನಮ್ಮ ಬದುಕಿನ ಬಯಕೆಗಳ ಈಡೇರಿಕೆ, ಆಧ್ಯಾತ್ಮಿಕ ಅರ್ಥದಲ್ಲಿ 'ಕಾಯಕವೇ ಕೈಲಾಸ' ಎನ್ನುವುದು ಶಿವ ಸಾನ್ನಿಧ್ಯಪ್ರಾಪ್ತಿಯ ಒಂದು ಸಾಧನಾ ಮಾರ್ಗ. ಇಲ್ಲಿನ ಕಾಯಕ ಕೇವಲ ಒಂದು ಯಾಂತ್ರಿಕ ಕ್ರಿಯೆಯಲ್ಲ, ಅದು ಶ್ರಮ, ಸ್ಫೂರ್ತಿ ಮತ್ತು ಶ್ರದ್ಧೆಗಳಿಂದ ಮಾಡುವಂತಹುದು. ಭೌತಿಕ ಅಗತ್ಯಗಳಿಗೆ ಸಂಬಂಧಿಸಿದ್ದರೂ ಅವರಲ್ಲಿ ನಿರಂಜನ ದರ್ಶನವಿದೆ.

ಸಮಾಜ ಪ್ರಗತಿಯ ಹೆಜ್ಜೆಗಳನ್ನಿಡಬೇಕಾದರೆ ಮತ್ತು ಸುಖಮಯ ವಾಗಬೇಕಾದರೆ ಎಲ್ಲರೂ ತಮ್ಮ ತಮ್ಮ ಉದ್ಯೋಗಗಳನ್ನು ಶ್ರದ್ಧೆ ನಿಷ್ಠೆ, ಪ್ರಾಮಾಣಿಕವಾಗಿ ಮಾಡಬೇಕು. ಕಾಯಕದ ಮಹತ್ವವನ್ನು ಅರ್ಥಮಾಡಿಕೊಂಡು ಅನುಷ್ಠಾನಕ್ಕೆ ತರಬೇಕು ಎಂಬ ವಿಚಾರವನ್ನು ಶರಣರು ಒತ್ತಿ ಹೇಳಿದ್ದಾರೆ. ಇನ್ನೊಬ್ಬರ ಹಂಗಿನಲ್ಲಿ ಬಾಳುವ ಜೀವನ ಒಂದು ಜೀವನವೇ ಅಲ್ಲ ಎಂಬುದನ್ನು ಪ್ರತಿಯೊಬ್ಬರೂ ಅರಿಯಬೇಕು. "ಅನ್ಯರ ಮನೆಗೆ ಹೋಗಿ ತನ್ನುದುರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆ' ಎಂದಿದ್ದಾರೆ ವಿಶ್ವವಿಭೂತಿ ಪುರುಷ ಬಸವಣ್ಣ.

ಈ ಸಂದರ್ಭದಲ್ಲಿ ನುಲಿಯ ಚಂದಯ್ಯನ ವಚನ ಉಲ್ಲೇಖನೀಯ.

*'ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ*
*ಲಿಂಗವಾದಡೂ ಕಾಯಕದಂದಲೆ ಶಿಲೆಯಕುಲ ಹರಿವುದು*
*ಜಂಗಮವಾದಡೂ ಕಾಯಕದಿಂದಲೇ ವೇಶಪಾಶ ಹರಿವುದು*
*ಗುರುವಾದಡೂ ಚಿರಸೇವೆಯ ಮಾಡಬೇಕು*
*ಜಂಗಮವಾದಡೂ ಚಿರಸೇವೆಯ ಮಾಡಬೇಕು*
*ಇದು ಚನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು'*

ಎನ್ನುತ್ತಾನೆ ನುಲಿಯ ಚಂದಯ್ಯ. ಈತ ಹಗ್ಗ ಹೊಸೆಯುವ ಕಾಯಕವನ್ನು ಕೈಗೊಂಡಿದ್ದವನು. ಅದನ್ನು ನಿಷ್ಠೆಯಿಂದ ನಡೆಸುತ್ತಲೇ ಸಾಧನೆಯ ಮಾರ್ಗದಲ್ಲಿ ಮುಂದುವರೆದವನು.

ಈ ವಚನದಲ್ಲಿ 'ಕಾಯಕ' ಎಂಬ ಒಂದೇ ಒಂದು ನುಡಿಯ ಸುತ್ತಲೂ ಶರಣರ ಹಲವಾರು ಧಾರ್ಮಿಕ ಕ್ರಿಯೆಗಳು ಹಾಗೂ ಪ್ರಕಾರಗಳು ಸುತ್ತಿಕೊಂಡಿವೆ. ಉದಾಹರಣೆಗೆ 'ಗುರು', 'ಜೀವನ್ಮುಕ್ತಿ', 'ಲಿಂಗ', 'ಶಿಲೆಯ ಕುಲ', 'ಜಂಗಮ', 'ವೇಶದ ಪಾಶ' ಮುಂತಾದವು. ಈ ಎಲ್ಲದರ ಪ್ರತಿಯೊಂದು ಕ್ರಿಯೆಯೂ ಶರಣ ಮಾರ್ಗದಲ್ಲಿ ಅವಶ್ಯವಾಗಿ ಪಾಲಿಸಬೇಕಾದಂಥ ನಿಯಮಗಳು ಅಥವಾ ಕರ್ತವ್ಯಗಳನ್ನು ಸೂಚಿಸುತ್ತದೆ. ಶರಣರು ಇಂಥ ಮಹತ್ವದ ವಿಷಯಗಳ ನಡುವೆಯೂ ಆರ್ಥಿಕ ಚಿಂತನೆಗೆ, ವಿಚಾರಕ್ಕೆ ಕೊಟ್ಟ ಮಹತ್ವದ ಅರಿವಾಗುತ್ತದೆ. ಶರಣರ ಈ ಕಾಯಕದ ಅನುಷ್ಠಾನದಲ್ಲಿ ಅವರ ಆರ್ಥಿಕ ಚಿಂತನೆಯೂ ಒಳಗೊಂಡಿರುವುದು ವ್ಯಕ್ತವಾಗು ತ್ತದೆ. ೧೨ನೇ ಶತಮಾನದಲ್ಲಿ ಕಾಯಕಕ್ಕೆ ಅಂತಹ ಮಹತ್ವ ದೊರೆತ್ತಿ ದ್ದರಿಂದಲೇ ಚೆನ್ನಯ್ಯ ಚಮ್ಮಾರನಾದರೂ ತಾನು ಮಾದಿಗ ನೆಂದಾಗಲಿ, ಮಾಚಯ್ಯ ತಾನು ಮಡಿವಾಳನೆಂದಾಗಲೀ. ರಾಮಣ್ಣ ತಾನೊಬ್ಬ ದನ ಕಾಯುವನೆಂದಾಗಲಿ ತೋರಲಿಲ್ಲ. ಇದು ವ್ಯಕ್ತಿಯ ಆರ್ಥಿಕ ಚಿಂತನೆ, ಜೀವನದಲ್ಲಿ ನೆಮ್ಮದಿಯ ದೃಷ್ಟಿಯಲ್ಲಿ ಶರಣರು ಸಾಧಿಸಿ ತೋರಿಸಿದ ಅವರ ಮಹೋನ್ನತ ಜೀವನ ದೃಷ್ಟಿಯನ್ನು ಕಾಣಬಹುದು.





ನುಲಿಯ ಚಂದಯ್ಯ ಉತ್ತಮವಾದ ಜೀವನ ಸಾಗಿಸುತ್ತಿದ್ದ ವನು. ಪ್ರತಿನಿತ್ಯವೂ ಪ್ರಾತಃಕಾಲದ ಪೂಜೆಯನ್ನು ಶ್ರದ್ಧೆಯಿಂದ ಮುಗಿಸಿ ಹಳ್ಳಕ್ಕೆ ಹೋಗಿ ಅಲ್ಲಿ ನಳನಳಿಸಿ ಬೆಳೆದ ಹುಲ್ಲನ್ನು ಕುಯ್ದು ತಂದು ಅದರಿಂದ ನುಲಿ, ಕಣ್ಣಿ, ಹಗ್ಗ ಹೊಸೆಯುವುದು, ಅವುಗಳನ್ನು ಮಾರಿ ಬಂದ ಹಣದಿಂದ ಜಂಗಮ ದಾಸೋಹ ಸೇವೆ ಮಾಡುವುದು, ಅವನು ನಡೆಸುತ್ತಿದ್ದ ಜೀವನದ ದಿನಚರಿ.

ಚಂದಯ್ಯ ಒಮ್ಮೆ ಎಂದಿನಂತೆ ಹಳ್ಳದಲ್ಲಿ ಹುಲ್ಲು ಕೊಯ್ಯುತ್ತಿರುವಾಗ ಅವನ ದೇಹದ ಮೇಲಿದ್ದ ಲಿಂಗ ಜಾರಿ ನೀರಿನಲ್ಲಿ ಬಿದ್ದಿತು. ಅದನ್ನು ಗಮನಿಸದೆ ತನ್ನ ಕಾಯಕದಲ್ಲಿ ಮೈಮರೆತಿದ್ದ. ನೀರಿನಲ್ಲಿ ಬಿದ್ದ ಇಷ್ಟಲಿಂಗವನ್ನು ಅಲ್ಲಿಯೇ ಬಿಟ್ಟು ಹುಲ್ಲಿನ ಹೊರೆಹೊತ್ತು ಹೊರಡಲು, ಇಷ್ಟಲಿಂಗವೂ ಅವನನ್ನು ಹಿಂಬಾಲಿಸಿ ಹೊರಟಿತೆಂದೂ "ನಾನು ಹೋಗೆನ್ನದೆ ಹೋಗಿರುವ ನಿನ್ನನ್ನು ಮರಳಿ ಸ್ವೀಕರಿಸಲಾರೆ"ನೆಂದು ನುಡಿದ ನುಲಿಯ ಚಂದಯ್ಯ ಹಾಗೆಯೇ ಹೊರಟನೆಂದೂ, ಮಡಿವಾಳ ಮಾಚಯ್ಯನ ಮಧ್ಯಸ್ಥಿಕೆಯಿಂದ "ಕಾಯಕದಲ್ಲಿ ನೆರವಾಗುವುದಾದರೆ ಮನೆಗೆ ಬರಲಿ" ಎಂದು ಚಂದಯ್ಯ ಕರಾರು ಹಾಕಿದನೆಂದೂ ಲಿಂಗವು ಅವನ ಕರಾರಿಗೆ ಒಪ್ಪಿ ತಾನೊಂದು ಕಣ್ಣಿ ಹೊಸೆದು ಮಾರಲು ಹೋದಾಗ; ಅದನ್ನು ಕೊಳ್ಳಲು ಯಾರೂ ಮುಂದೆಬರಲಿಲ್ಲ. ಆಗ ಅದು ಬಸವಣ್ಣನ ಮನೆಗೆ ಹೋಯಿತೆಂದೂ, ಬಸವಣ್ಣನವರಿತ್ತ ಸಾವಿರ ಹೊನ್ನುಗಳನ್ನು ತಂದುಕೊಡಲು 'ಇದು ಆಶೆಯಿಂದ ಬಂದ ಹೊನ್ನು ಕಾಯಕಕ್ಕೆ ಸಲ್ಲದೆಂದು' ಭಾವಿಸಿದ ಚಂದಯ್ಯ ಒಂದು ಹೊನ್ನನ್ನು ಮಾತ್ರ ಉಳಿಸಿಕೊಂಡು ಉಳಿದುದನ್ನು ಬಸವಣ್ಣನವರಿಗೆ ಹಿಂದುರಿಗಿಸಿದನೆಂದು ತಿಳಿದುಬರುತ್ತದೆ.

ಈ ಕತೆ; ಲಿಂಗವಾದರೂ ಚಂದಯ್ಯನಂಥ ಕಾಯಕ ನಿಷ್ಠ ಶರಣನಿಂದ ಕಾಯಕದ ಪಾಠಕಲಿಯುವಂತಾದುದು ಒಂದು ದೃಷ್ಟಾಂತ. ಅಂದರೆ ಸಾಕ್ಷಾತ್ ಪರಮಾತ್ಮನೇ ತನ್ನ ಭಕ್ತನಿಂದ ಪಾಠಕಲಿಯುವಂತಾದುದು ಶರಣರು ಕಾಯಕಕ್ಕೆಕೊಟ್ಟ ಗೌರವ, ನೋಡುವ ದೃಷ್ಟಿಯ ದಿವ್ಯದರ್ಶನವಾಗುತ್ತದೆ.

ಅವನ ಮತ್ತೊಂದು ವಚನ :

*"ಸತ್ಯಶುದ್ಧ ಕಾಯಕದಲ್ಲಿ ಚಿತ್ತ ವಿಚ್ಛಂದವಾಗಿರಬೇಕು*
*ನೇಮದ ಕೂಲಿಯಂದಿನ ನಿತ್ಯನೇಮದಲ್ಲಿ ಸಂದಿರಬೇಕು*
*ನೇಮಕ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯದ ಹಿಡಿದರೆ*
*ತಾ ಮಾಡುವ ಸೇವೆ ನಷ್ಟವಯ್ಯ"*

ಈ ವಚನ ಮೇಲುನೋಟಕ್ಕೆ ಸರಳವಾಗಿ ಕಂಡರೂ ಒಳಹೊಕ್ಕು ನೋಡಿದಾಗ ಸಂಕೀರ್ಣವಾಗುತ್ತಾ ಹೋಗುತ್ತದೆ. ಅನೇಕ ಗಹನವಾದ ವಿಚಾರಗಳು ಒಳಗೊಂಡಿರುವುದು ಕಂಡು ಬರುತ್ತದೆ. ತಾನು ಕೈಗೊಂಡ ಉದ್ಯೋಗವನ್ನು ಶುದ್ಧವಾದ ಮನಸ್ಸಿನಿಂದ; ಪ್ರಾಮಾಣಿಕತೆಯಿಂದ ನೆರವೇರಿಸಬೇಕು. ಹಾಗೆ ಮಾಡಿದ ಕಾಯಕಕ್ಕೆ ನಿಗದಿಪಡಿಸಿದಷ್ಟು ಪ್ರತಿಫಲವನ್ನು ಮಾತ್ರ ಪಡೆಯ ಬೇಕು. ಹಾಗೆ ಮಾಡದೆ ಹೇಮದಾಸೆಗೆ ಕಾಮಿಸಿ ದ್ರವ್ಯದ ಹಿಡಿದರೆ "ತಾ ಮಾಡುವ ಸೇವೆ ನಷ್ಟ, ಅಥವಾ ಅದು ನಿಯಮ ಬಾಹಿರ. ನೇಮದ ಕೂಲಿಗೆ ಸರಿಯಾಗುವಷ್ಟು ಕಾಯಕ ಸಂದಿರ ಬೇಕು. ಅಲ್ಲದೆ ಹಾಗೆ ಪಡೆದ ಕೂಲಿಯನ್ನು ಯಾವುದೇ ಕಾರಣಕ್ಕೂ ಸಂಗ್ರಹಿಸು ವಂತಿಲ್ಲ. ಶರಣರ ಈ ಮೌಲಿಕವಾದ, ಅರ್ಥಪೂರ್ಣ ವಾದ ಸಿದ್ಧಾಂತವನ್ನು ಇಂದಿನ ಸಮಾಜದಲ್ಲಿ ಅನುಷ್ಠಾನಕ್ಕೆ ತಂದಿದ್ದರೆ ಮೇಲು-ಕೀಳು-ದುರಾಸೆ, ಕೊಲೆ- ಸುಲಿಗೆ, ಮೋಸ ವಂಚನೆ ಇವೇ ಮೊದಲಾದ ಅನಿಷ್ಟಗಳು ಇರುತ್ತಿರಲಿಲ್ಲ. ಅಲ್ಲದೆ 'ಕಪ್ಪು ಹಣ'ದ ಪರಿಕಲ್ಪನೆಯೇ ಇರುತ್ತಿರಲಿಲ್ಲ.

ಕಾಯಕದಲ್ಲಿ ಮೇಲು-ಕೀಳೆಂಬ ಭಾವನೆಯಿಲ್ಲದೆ ಸದ್ಗುಣಗಳಿಂದಲೇ ಯೋಗ್ಯತೆಯನ್ನು ನಿರ್ಧರಿಸುವ ಮತ್ತು ಎಲ್ಲರೂ ಸಮಾನ ಅವಕಾಶಗಳನ್ನು ಪಡೆಯಬಲ್ಲ ಆದರ್ಶ ಸಮಾಜ ರಚನೆ ಶರಣರ ಮಹೋದ್ದೇಶವಾಗಿತ್ತು. ವ್ಯಕ್ತಿ ಯಾವುದೇ ವೃತ್ತಿಯನ್ನು ಕೈಗೊಂಡಿರಲಿ ಅವನಿಗೆ ತನ್ನ ಪೂರ್ಣ ವಿಕಾಸಕ್ಕೆ ಅವಕಾಶ ಸಿಕ್ಕಬೇಕು. ಮೇಲುಕೀಳೆಂಬುದು ಉದ್ಯೋಗಳಲ್ಲಿಲ್ಲ; ಅವರು ನಿರ್ವಹಿಸುವ ಮನೋಧರ್ಮದಲ್ಲಿದೆ. ಉದ್ಯೋಗಗಳು ಕಾಯಕ ಗಳಾಗಿ ಪರಿಣಮಿಸಿದಾಗ ಅವು ಸಾಧನೆಗೆ ಅಡ್ಡಿಯಾಗು ವುದಿಲ್ಲವೆಂದು ಶರಣರು ಸಾರಿದರು. ಮತ್ತು ಆಚರಣೆಯಲ್ಲಿ ಸಾಧಿಸಿ ತೋರಿಸಿ ದರು. ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ ಅಂಬಿಗರ ಚೌಡಯ್ಯ, ತುರಗಾಹಿ ರಾಮಣ್ಣ, ಸುಂಕದ ಬಂಕಣ್ಣ, ಮಾದಾರ ಧೂಳಯ್ಯ, ಹೂಗಾರ ಮಾದಯ್ಯ, ತಳವಾರ ಕಾಮಿದೇವ, ಗಾಣದ ಕನ್ನಪ್ಪ, ವೈದ್ಯ ಸಂಗಣ್ಣ, ಕೊಟ್ಟಣದ ರೆಮ್ಮವ್ವೆ, ಮೋಳಿಗೆ ಮಾರಯ್ಯ ಈ ಮೊದಲಾದ ಶರಣರು ಕಾಯಕದ ಸಾಕಾರ ಮೂರ್ತಿಗಳಾಗಿದ್ದಾರೆ. ಅವರ ಹೆಸರಿನ ಹಿಂದಿರುವ ವೃತ್ತಿ ಸೂಚಕಗಳು ಅವರು ಕೈಗೊಂಡ ಕಾಯಕವನ್ನು ಸೂಚಿಸುತ್ತವೆ ದನಕಾಯುವುದು ದೋಣಿ ನಡೆಸುವುದು ಗಾಣ ಆಡಿಸುವುದು, ಬುಟ್ಟಿ ಮಾಡವುದೇ ಇವೇ ಮೊದಲಾದ ಅನೇಕ ಉದ್ಯೋಗಗಳನ್ನು ಕೈಗೊಂಡ ಶರಣರ ಅನುಭವ ಮಂಟಪಕ್ಕೆ ಬಂದಾಗ ಮಂತ್ರಿ ಬಸವಣ್ಣನಿಗೆ ಸರಿಸಮಾನವಾಗಿ ಕುಳಿತು ಆಧ್ಯಾತ್ಮಿಕ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು.

ಈ ಹಿನ್ನೆಲೆಯಲ್ಲಿ ಆಯ್ದಕ್ಕಿ ಮಾರಯ್ಯನ ವಚನವನ್ನು ವಿಶ್ಲೇಷಿಸಬೇಕಾಗುತ್ತದೆ. ಈ ವಚನದ ಮೊದಲ ಸಾಲು "ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯ ಬೇಕು". ವೀರಶೈವ ಸಾಧನೆಯ ಮಾರ್ಗದಲ್ಲಿ ಗುರುವಿನ ಸ್ಥಾನ ಮಹತ್ವಪೂರ್ಣವಾದುದು. ಲಿಂಗಾಂಗ ಸಾಮರಸ್ಯದತ್ತ ನಡೆಯುವ ಷಟ್‌ಸ್ಥಲಮಾರ್ಗದಲ್ಲಿ ಮೊದಲ ಸ್ಥಾನ ಗುರುವಿಗೆ ಸಾಧಕನಿಗೆ ದೀಕ್ಷೆಯನ್ನಿತ್ತು ಅವನ ದೇಹಭಾಗವನ್ನು ಗುರು ಕಳೆಯುತ್ತಾನೆ. ದೇಹಭಾಗ ಅಳಿದು ಶಿವಭಾವ ಅಳವಡುವುದೇ ಅಂಗಸ್ಥಲದ ಮೊದಲ ಮೆಟ್ಟಿಲು. ವಾಸ್ತವವಾಗಿ 'ಅಂಗ' ಎನ್ನುವ ಹೆಸರಿಗೆ ಆತ ಅರ್ಹನಾಗುವುದೇ ಈ ಶಿವಭಾವವನ್ನು ಪಡೆದಾಗ ಗುರು ಸಾಧಕನ

ಕರಸ್ಥಲಕ್ಕೆ ಇಷ್ಟಲಿಂಗವನ್ನಿತ್ತು ಅವನ ಮಾಂಸಪಿಂಡವನ್ನು ಪರಿವರ್ತಿಸಿ ಮಂತ್ರ ಪಿಂಡವನ್ನಾಗಿ ಮಾಡುತ್ತಾನೆ. ಆತನ ಚೈತನ್ಯಶಕ್ತಿಯನ್ನೇ ಇಷ್ಟಲಿಂಗದಲ್ಲಿ ನಿಯತಗೊಳಿಸಿ ಅದರ ಅನುಸಂಧಾನದಲ್ಲಿ ತೊಡಗಿಸುತ್ತಾನೆ. ಇದರಿಂದ ದೇಹ ಪರಿವರ್ತಿತವಾಗಿ 'ಅಹಂ' ಅನ್ನು ಕಳೆದುಕೊಂಡು ಗುರುವಿಗೆ ಸಮರ್ಪಿತವಾಗುತ್ತದೆ. ಇದೇ ತನುವನ್ನು ಗುರುವಿಗೆ ಅರ್ಪಿಸಬೇಕು ಎನ್ನುವ ಅರ್ಥ. ಹೀಗೆ ಅರ್ಪಿತವಾದ ಗುರು ಆತನಿಗೆ ದೀಕ್ಷೆಯನ್ನು ಕೊಡುತ್ತಾನೆ ಮತ್ತು ಮೋಕ್ಷದತ್ತ ಅವನನ್ನು ಕರೆದೊಯ್ಯುತ್ತಾನೆ. ಗುರುವಿನಿಂದ ದೇಹಭಾವವನ್ನು ಮರೆಯಬೇಕೆಂಬುದೇ ಇದೆಲ್ಲದರ ಹಿಂದಿರುವ ಮುಖ್ಯ ಆಶಯ. ಇದನ್ನೇ ಘಟ್ಟಿವಾಳಯ್ಯ ತನ್ನ ವಚನವೊಂದರಲ್ಲಿ 'ತನು ಮರೆಯಬೇಕೆಂಬುದು ಗುರುವ ತೋರಿ' ಎಂದು ಹೇಳಿದ್ದಾನೆ.

ಲಿಂಗ, ಅಷ್ಟಾವರಣಗಳಲ್ಲಿ ಒಂದೆಂಬುದು ಮಾತ್ರವಲ್ಲ ಇದು ವೀರಶೈವದ ತಳಹದಿಯೂ ಹೌದು; ಹೊಂಗಳಸವೂ ಹೌದು. ಈ ಧರ್ಮದ ತಾತ್ವಿಕ ವಿವೇಚನೆ, ಆಚರಣೆಯ ಮಾರ್ಗ, ಸಾಮಾಜಿಕ, ನೈತಿಕ, ನಿಯಮ, ನಿಷ್ಠೆಗಳೆಲ್ಲಕ್ಕೂ ಲಿಂಗವೇ ಕೇಂದ್ರ ಶಕ್ತಿಯಾಯಿತು. ತತ್ವದರ್ಶನದಲ್ಲಿ ಅತ್ಯುನ್ನತ ನಿಲವನ್ನು ಕಂಡು ಕೊಳ್ಳುವುದಕ್ಕೆ ಇದು ಕಾರಣವಾದಂತೆ, ಸಾಮಾಜಿಕ ವ್ಯವಸ್ಥೆಯಲ್ಲಿ ವಿಷಮತೆಯನ್ನು ಅಳಿಸಿಹಾಕಿ ಸರ್ವಸಮಾನತೆಯನ್ನು ಸಾಧಿಸು ವುದಕ್ಕೆ ಇದು ಸಾಧನ ವಾಯಿತು. ಲಿಂಗದ ಈ ವ್ಯಾಪಕತೆಯನ್ನು ಕಂಡೇ ಬಸವಣ್ಣನವರು ಇದನ್ನು ಅಂಗೀಕರಿಸಿ ಲೋಕೋದ್ಧಾರದ ಕ್ರಾಂತಿಕಾರಕ ಕಾರ್ಯ ಕ್ಷೇತ್ರಕ್ಕೆ ಕಾರಣ ಶಕ್ತಿಯನ್ನಾಗಿಸಿ ಅಳವಡಿಸಿ ಕೊಂಡಂತೆ ತೋರುತ್ತದೆ.

ಗುರುವಿನಿಂದ ತನುವನ್ನು ಮರೆತ ಸಾಧಕನ ಕರಸ್ಥಲಕ್ಕೆ ಬಂದ ಲಿಂಗ ಆತನ ಮನವನ್ನು ಮರೆಯುವಂತೆ ಮಾಡಲು ಕಾರಣ ವಾಗುತ್ತದೆ. "ಮನವ ಮರೆಯಬೇಕೆಂದು ಲಿಂಗವ ತೋರಿ" ಎಂಬ ಮಾತು ಇದನ್ನೇ ಹೇಳುತ್ತದೆ. ದೇವರನ್ನು ಗುಡಿಗುಂಡಾರ ಗಳಲ್ಲಿ ಹುಡುಕುವುದನ್ನು ತಪ್ಪಿಸಿ ಮನಸ್ಸನ್ನು ಅಂತರ್ಮುಖಿಗೊಳಿಸಿ ತನ್ನಲ್ಲಿಯೇ ದೇವರನ್ನು ಕಂಡುಕೊಳ್ಳುವ ಸಾಧನ ಈ ಇಷ್ಟಲಿಂಗ. ಶಿಷ್ಯನ ಚೈತನ್ಯವನ್ನೇ ಗುರುಲಿಂಗದಲ್ಲಿ ಸಂಗತಗೊಳಿಸಿ ಅದನ್ನು ಆತ ದೇಹದಮೇಲೆ ಧರಿಸುತ್ತಾನೆ. ಕರಸ್ಥಳದಲ್ಲಿಟ್ಟು ಅದನ್ನು ಪೂಜಿಸುವ ರಹಸ್ಯವನ್ನು ಗುರು ಹೇಳಿಕೊಡುತ್ತಾನೆ. ಉಪಾಸನೆಯ ಸಾಧನ ವಾಗುತ್ತದೆ. "ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ" ಎನ್ನುವಂತೆ ಇತರ ಎಲ್ಲ ದೇವರುಗಳನ್ನು ಗುಡಿಯಲ್ಲಿರುವ ಸ್ಥಾವರ ಲಿಂಗವನ್ನು ಕೈಬಿಟ್ಟು ಕರಸ್ಥಲದಲ್ಲಿರುವ ಇಷ್ಟಲಿಂಗವೊಂದಕ್ಕೆ ತನ್ನ ಮನವನ್ನು ಸಾಧಕ ಸಂಪೂರ್ಣವಾಗಿ ಅರ್ಪಿಸಬೇಕು. ಆ ಮೂಲಕ ಮನಸ್ಸನ್ನು ಮರೆಯಬೇಕು ಎಂದರೆ ಲಿಂಗದಲ್ಲಿಯೇ ಕೇಂದ್ರೀಕರಿಸ ಬೇಕು. ಏಕಾಗ್ರತೆಯಿಂದ ಪೂಜಿಸ ಬೇಕು. ಇಷ್ಟಲಿಂಗದ ಅನುಸಂಧಾನದಲ್ಲಿ ತೊಡಗಿದಾಗ ಮನಸ್ಸು ತನ್ನ ಸಹಜ ಸ್ವರೂಪವನ್ನು ಕಂಡುಕೊಳ್ಳುತ್ತದೆ. ಅದರಲ್ಲಿಯೇ ಮಗ್ನವಾಗಿ ತನ್ನನ್ನು ತಾನು ಮರೆಯುತ್ತದೆ. ಇದನ್ನೇ 'ಮನಮಗ್ನ ಯೋಗ' ಎಂದು ಅಲ್ಲಮಪ್ರಭು ಹೇಳುವ ಮಾತು. ಈ ಹಂತವನ್ನು ಕುರಿತದ್ದು, ಇಷ್ಟಲಿಂಗಕ್ಕೆ ಹೀಗೆ ಸಂಪೂರ್ಣವಾಗಿ ಮನಸ್ಸನ್ನು ಅರ್ಪಿಸಿ ಇಲ್ಲದಂತಾಗುತ್ತದೆ.

ಲಿಂಗಾಂಗ ಸಾಮರಸ್ಯವನ್ನು ಕುರಿತು ಷಣ್ಮುಖ ಶಿವ ಯೋಗಿಗಳು ತಮ್ಮ ವಚನದಲ್ಲಿ ತಮ್ಮ ಭಾವನೆಗಳನ್ನು ಅಭಿವ್ಯಕ್ತಿ ಗೊಳಿಸಿದ್ದಾರೆ.

*"ಘನ ಮಹಾಲಿಂಗಕ್ಕೆ*
*ಮನವೇ ಪೀಠವಾಗಿ, ತನುವೆ ಶಿವಾಲಯವಾಗಿ*
*ನೆನವೇ ಪೂಜೆಯಾಗಿ, ಧ್ಯಾನವೇ ತೃಪ್ತಿಯಾಗಿ*
*ಅಂಬುಧಿಯೊಳಗೆ ಮುಳುಗಿದ ಪೂರ್ಣಕುಂಭದಂತೆ*
*ನಿಮ್ಮ ಅವಿರಳ ದಿವ್ಯಮಹಾಬೆಳಗಿನೊಳಗೆ ಮುಳುಗಿ*
*ನಾನು ನೀನೆಂಬ ಭಯದ ಕುರುಹ ಮರೆತು*
*ತನು ಅರಿಯದಿರ್ದನಯ್ಯಾ ಅಖಂಡೇಶ್ವರಾ"*

ಇಷ್ಟಲಿಂಗವು ವ್ಯಕ್ತಿಗೆ ಸೇರಿದ್ದು. ಗುರುವು ತಾನೇ ಕೈಯಾರ ಹರಸಿ ಪೂಜಾವಿಧಾನ ಮಂತ್ರಗಳೊಡನೆ ಪ್ರೀತಿಯಿಂದ ಕೊಟ್ಟಿದ್ದು – ಭಕ್ತನಿಗೂ ಇಷ್ಟಲಿಂಗಕ್ಕೆ ಇರುವ ಸಂಬಂಧ ಗಾಢವಾದುದು. ತೀರ ವೈಯಕ್ತಿಕವಾದುದು. ಇಷ್ಟಲಿಂಗ ಪೂಜೆಯಲ್ಲಿ ಪೂಜಾರಿಯ ಮಾಧ್ಯಮವಿಲ್ಲ. ಭಕ್ತನು ತನ್ನ ಆತ್ಮದ ವೇದನೆ ನಿವೇದನೆಗಳನ್ನು ನೇರವಾಗಿ ದೈವದಲ್ಲಿ ಹೇಳಿಕೊಳ್ಳಬಹುದು. ಇಲ್ಲಿ ಜಾತಿಯ ಪ್ರಶ್ನೆ ಇಲ್ಲ. ದೇವಾಲಯದ ಪ್ರವೇಶ ನಿರ್ಬಂಧ, ಸ್ಪರ್ಶ-ಅಸ್ಪೃಶ್ಯ ಪ್ರಶ್ನೆ ಇಲ್ಲ. ದೇಹದ ಮೇಲೆ ಸದಾ ದೈವವಿರುವುದರಿಂದ ವ್ಯಕ್ತಿಗೆ ಒಂದು ಬಗೆಯ ಆತ್ಮವಿಶ್ವಾಸ – ತನ್ನನ್ನು ಕಾಯುವ ದೈವ ತನ್ನ ದೇಹದ ಮೇಲೆ ಇದೆ. ಅದು ಸಾಂಕೇತಿಸುವ ದೈವ ತನ್ನ ಒಳಗೇ ಇದೆ ಎಂಬ ನಂಬಿಕೆ ಅವನಿಗೆ ಧೈರ್ಯವನ್ನು ತಂದುಕೊಡುವಂತಹದು.

ಕಾಯಕದಲ್ಲಿ ತೊಡಗಿರುವಾಗ ಇಂತಹ ಲಿಂಗಪೂಜೆಯನ್ನು ಮರೆಯಬೇಕೆಂದು ಆಯ್ದಕ್ಕಿ ಮಾರಯ್ಯ ಹೇಳಿದ್ದಾನೆ. ಶರಣರು ನೀಡಿದ ಕಾಯಕದ ಪರಿಕಲ್ಪನೆ ಲಿಂಗಪೂಜೆಗಿಂತಲೂ ಶ್ರೇಷ್ಠ ವಾದುದು, ಮಹತ್ವಪೂರ್ಣವಾದುದು.

ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು ಅರ್ಪಿಸಿದಂತೆ ಜಂಗಮಕ್ಕೆ ಧನವನ್ನು ಅರ್ಪಿಸಬೇಕು ಎಂಬುದು ತ್ರಿವಿಧ ದಾಸೋಹ ಸೂತ್ರ. ಜಂಗಮ ಎನ್ನುವುದು ವೀರಶೈವಕ್ಕೆ ವಿಶಿಷ್ಟವಾದುದು ಷಟ್‌ಸ್ಥಲ ಮಾರ್ಗದ ಮುನ್ನಡೆಯಲ್ಲಿ ಇದರ ಮಹತ್ವವನ್ನು ಮತ್ತೆ ಮತ್ತೆ ಕಾಣುತ್ತೇವೆ. ಅಷ್ಟಾವರಣದಲ್ಲಿ ಗುರು, ಲಿಂಗ, ಜಂಗಮ ಇವು ಬಹಳ ಪ್ರಮುಖವಾದುವು. ಗುರುವಿನ ಮಹತ್ವವನ್ನು ಎಲ್ಲ ಧರ್ಮಗಳಲ್ಲಿಯೂ ಕಾಣುತ್ತೇವೆ. ಆದರೆ 'ಜಂಗಮ' ಎಂಬುದು ವೀರಶೈವಕ್ಕೆ ಮಾತ್ರ ವಿಶಿಷ್ಟವಾದ ಒಂದು ಪರಿಕಲ್ಪನೆ. ಗುರು ಲಿಂಗವನ್ನು ಕೊಡುತ್ತಾನೆ. ಅದರ ರಹಸ್ಯವನ್ನು ಹೇಳಿ ಸಾಧಕನನ್ನು ಷಟ್‌ಸ್ಥಲ ಮಾರ್ಗದಲ್ಲಿ ತೊಡಗಿಸುತ್ತಾನೆ. ಆ ಮಾರ್ಗದಲ್ಲಿ ಸಾಧಕನ ಪ್ರಗತಿಯನ್ನು ಅಲೆಯುವವನು ಜಂಗಮ. ಒಂದು ಅರ್ಥದಲ್ಲಿ ಗುರು ಶಿಕ್ಷಕನಾದರೆ, ಜಂಗಮ ಪರಿವೀಕ್ಷಕ,





ಇಷ್ಟಲಿಂಗದ ರಹಸ್ಯವನ್ನು ಕಂಡು ಅದನ್ನು ಅಳವಡಿಸಿಕೊಳ್ಳುವುದಕ್ಕೆ ಈ ಇಬ್ಬರೂ ಒಂದೊಂದು ರೀತಿಯಲ್ಲಿ ನೆರವಾಗುತ್ತಾರೆ. ನಮ್ಮ ಅಂತರಂಗದಲ್ಲಿ ಲಿಂಗ ಜ್ಯೋತಿಯನ್ನು ಬೆಳಗಿಸುವ, ಬೆಳೆಸುವ ಸಾಧಕನ ಲಿಂಗನಿಷ್ಠೆ ಯನ್ನು ನಿಷ್ಠೂರವಾಗಿ ಪರೀಕ್ಷಿಸಿ ಅವನನ್ನು ಮುನ್ನಡೆಸುತ್ತಾನೆ.

ಜಂಗಮ ಎಂಬ ಪದ ಬೇರೆ ಬೇರೆ ಹಂತಗಳಲ್ಲಿ ಅತಿವ್ಯಾಪಕ ವಾಗಿ ಅರ್ಥ ಬಳಸಿರುವುದು ಕಾಣುತ್ತದೆ. 'ಜಂಗಮಕ್ಕೇರಿದರೆ ಸ್ಥಾವರ ನೆನೆಯಿತ್ತು', 'ಸ್ಥಾವರಕ್ಕಳಿವುಂಟು ಜಂಕಮಕ್ಕಳಿವಿಲ್ಲ' ಎಂಬ ಮಾತುಗಳಲ್ಲಿ ವಿಶ್ವವನ್ನೇ ಒಳಗೊಳ್ಳುವಷ್ಟು ವ್ಯಾಪಕವಾದ ಅರ್ಥದಲ್ಲಿ ಅದನ್ನು ಬಳಸುತ್ತಾರೆ.

"ವಚನ ಸಾಹಿತ್ಯದಲ್ಲಿ 'ಜಂಗಮ' ಪದ ಎಲ್ಲೆಲ್ಲಿ ಬಳಕೆ ಯಲ್ಲಿದೆಯೋ ಅಲ್ಲೆಲ್ಲ ಅದು ನಪುಂಸಕದಲ್ಲಿರುವುದನ್ನು ಗಮನಿಸ ಬೇಕು. 'ಜಂಗಮದ', 'ಜಂಗಮಕ್ಕೆ', 'ಜಂಗಮವ','ಜಂಗಮವು' ಇತ್ಯಾದಿ. ಎಲ್ಲಿಯೂ 'ಜಂಗಮನು' ಇತ್ಯಾದಿ ಪುಲ್ಲಿಂಗ ಪ್ರಯೋಗವು ಬಂದಿಲ್ಲ. ಈ ಒಂದು ವ್ಯಾಕರಣ ವಿಶೇಷತೆ ಮೇಲ್ನೋಟಕ್ಕೆ ಚಿಕ್ಕದಾಗಿ ಕಂಡರೂ ವಿಚಾರಮಾಡಿ ನೋಡಿದರೆ ಅತ್ಯಂತ ಮಹತ್ವ ದಾಗಿರುವ ಸಂಗತಿಯಾಗಿದೆ ಹನ್ನೆರಡನೆಯ ಶತಮಾನದ ಪರಿಕಲ್ಪನೆ ಯಲ್ಲಿ 'ಜಂಗಮ' ಒಬ್ಬ ಮನುಷ್ಯ ವ್ಯಕ್ತಿಯಾಗಿರದೆ ಅವನು ಲಿಂಗದ ನಡೆದಾಡುವ ರೂಪವೇ ಆಗಿದ್ದ. ಅಂಗವು 'ಸ್ಥಾವರ', 'ಜಂಗಮ'ವೆಂಬ ಎರಡು ಬಗೆಯದೆಂದೂ ವಚನಗಳಲ್ಲಿ ಉಲ್ಲೇಖ ವಾಗಿದೆ. ಮನಸ್ಸನ್ನು ಕೊಟ್ಟು ಇಷ್ಟಲಿಂಗವನ್ನು ಸುಪ್ರೀತಗೊಳಿಸು ವಂತೆ, ಧನವನ್ನು ಕೊಟ್ಟು ಜಂಗಮವನ್ನು ಸುಪ್ರೀತಗೊಳಿಸಬೇಕು ತನುಮನಧನ ಇರುವುದು ಕ್ರಮವಾಗಿ ಗುರು, ಲಿಂಗ, ಜಂಗಮ ಸೇವೆಗಾಗಿ".

"ಬಸವಣ್ಣ ಕಂಡ ಜಂಗಮದ ಇನ್ನೊಂದು ಹಂತವನ್ನು ಮುಖ್ಯವಾಗಿ ಗಮನಿಸಬೇಕು ಬಸವಣ್ಣ ಜಂಗಮರನ್ನು ಧರ್ಮ ಪ್ರಚಾರವನ್ನಾಗಿಸಲು ಬಯಸಿದ. ಆ ದೃಷ್ಟಿಯಿಂದ ಅವರಿಗೆ ಅತಿ ಹೆಚ್ಚಿನ ಮಹತ್ವವನ್ನು ಕೊಟ್ಟ, ಬಸವತತ್ವ ಇಡೀ ಕರ್ನಾಟಕದಲ್ಲಿ ಮಾತ್ರವಲ್ಲ; ನಾಡಿನ ಗಡಿಯನ್ನು ದಾಟಿ, ಆಂಧ್ರ, ಕೇರಳ, ತಮಿಳು ನಾಡು, ಮಹಾರಾಷ್ಟ್ರ ಅಷ್ಟೇ ಅಲ್ಲ, ಉತ್ತರದ ನಾಡುಗಳಿಗೂ, ಕೊನೆಗೆ ಕಾಶ್ಮೀರದವರೆಗೂ ಹರಡಿದುದಕ್ಕೆ ಮುಖ್ಯವಾದ ಸಾಧನೆ ಈ ಜಂಗಮ ವ್ಯವಸ್ಥೆ. ಮಹಾಮನೆಯ ಅನುಭವ ಮಂಟಪದಲ್ಲಿ ಅವರನ್ನು ಧರ್ಮಪ್ರಚಾರಕನ್ನಾಗಿ ರೂಪಿಸಿ, ಅವರ ಜೋಳಿಗೆಗಳಿಗೆ ವಚನ ಸಾಹಿತ್ಯವನ್ನು ತುಂಬಿ ನಾಡಿನ ನಾನಾ ಭಾಗಗಳಿಗೆ ಅವರನ್ನು ಕಳುಹಿಸುತ್ತಿದ್ದರು. ಬಸವಣ್ಣನ ಕಾರ್ಯವಿಧಾನದ ಒಂದು ಮಹತ್ತರವಾದ ಅಂಶವೆಂದು ಭಾವಿಸಲು ಅವಕಾಶವಿದೆ. ಅವರು ಮಾನವ ಧರ್ಮದ ಸಂದೇಶವನ್ನು ಹಳ್ಳಿಹಳ್ಳಿಗಳಿಗೆ ಮನೆ ಮನೆಗಳಿಗೆ ಕೇಳುಗರ ಮನಮನಕ್ಕೆ ಮುಟ್ಟಿಸುತ್ತಿದ್ದರು. ಹೀಗೆ ಸಮಷ್ಟಿ ಜನಜಾಗೃತಿ ಒಂದು ಪ್ರಬಲ ಸಾಧನವನ್ನಾಗಿ ಜಂಗಮ ವ್ಯವಸ್ಥೆಯನ್ನು ಬಸವಣ್ಣ ಮಾಡಿದಂತೆ ಕಾಣುತ್ತಿದೆ. ಮಹಾಮನೆ ಯಲ್ಲಿ ನಡೆಯುತ್ತಿದ್ದ ಅಸಂಖ್ಯಾತ ಜಂಗಮ ದಾಸೋಹ ಸೋಮಾರಿ ಕೂಟವಾಗಿರದೆ ಇಂತಹ ಕಾರ್ಯನಿರತ ಜಂಗಮರಿಗೆ ವಿಶೇಷ ಮಹತ್ವವನ್ನು ಕೊಡುವುದಕ್ಕೆ ಮಹತ್ತರ ಹೊಣಗಾರಿಕೆಯ ಒಂದು ಕಾರಣ" ಎಂದು ಹೇಳಬಹುದು.

ಹೀಗೆ ಈ ವಚನವನ್ನು ಅಧ್ಯೈಸುತ್ತಾ ಹೋದಂತೆ ವಿಸ್ತಾರವಾಗುತ್ತಾ ಹೋಗುತ್ತದೆ. ವಚನದ ಮೊದಲ ಮೂರು ಸಾಲುಗಳು ಗುರು, ಲಿಂಗ, ಜಂಗಮ ಈ ಮೂರಕ್ಕಿಂತಲೂ 'ಕಾಯಕ' ಮಹತ್ವವಾದುದು ಎಂಬುದನ್ನು ಸೂಚಿಸುತ್ತದೆ. ಕಾಯಕದಲ್ಲಿಯೇ ಕೈಲಾಸವನ್ನು ಕಾಣುವ ಆಯ್ದಕ್ಕಿ ಮಾರಯ್ಯ, ಕಾಯಕ ತತ್ವವನ್ನು ಸರಳವಾಗಿ, ಅತ್ಯಂತ ಮೌಲಿಕವಾಗಿ ನಿರೂಪಿಸಿದ ಮಹಾಶರಣ. ಈ ವಚನದ ಮೂಲಕ ನೀಡಿದ ಅವನು ನೀಡಿದ ಸಂದೇಶ ಇಡೀ ಮನುಕುಲಕ್ಕೆ ಅನ್ವಯವಾಗು ವಂತಹುದು. "ಶರಣರು ಕಾಯಕಕ್ಕೆ ಮಹತ್ವಕೊಟ್ಟಂತೆ, ಅಸಂಗ್ರ ವನ್ನು ವಿರೋಧಿಸಿದರು. ಅವರು ಏಕನಿಷ್ಠೆಯಿಂದ ಕಾಯಕವನ್ನು ಜೀವನದಲ್ಲಿ ಒಂದು ಅವಿಭಾಜ್ಯ ಅಂಗವಾಗಿ ಮಾಡಿಕೊಂಡರು. ಹನ್ನೆರಡನೆಯ ಶತಮಾನದಲ್ಲಿ ನಡೆದ ಐತಿಹಾಸಿಕ ಆಂದೋಲನ ಗಾಂಧೀಜಿಯವರು ಮೇಲೆ ದಟ್ಟವಾದ ಪ್ರಭಾವವನ್ನು ಬೀರಿರು ವುದನ್ನು ಅವರ ಚಿಂತನೆಯಿಂದ ವ್ಯಕ್ತವಾಗುತ್ತದೆ. ವ್ಯಕ್ತಿ ತನಗೆ ಅಗತ್ಯವಾದುದಕ್ಕಿಂತ ಹೆಚ್ಚಾಗಿ ಸಂಗ್ರಹಿಸುವುದನ್ನು ಗಾಂಧೀಜಿ ಯವರು ವಿರೋಧಿಸಿದ್ದಾರೆ.

**"I suggest that we are thieves in a way if I take any thing that I do not need for my own Immedidate use and keep it I their if from somebody clse" (Ed. by Nirmal Kumar, Bose Selcections from Gandiji P-71).**

"ನಾವೆಲ್ಲರೂ ಒಂದು ರೀತಿಯಲ್ಲಿ ಕಳ್ಳರು. ನನಗೆ ಅಗತ್ಯವಿಲ್ಲದ್ದನ್ನು ಸಂಗ್ರಹಿಸಿಟ್ಟುಕೊಂಡರೆ ಅದನ್ನು ನಾವು ಇನ್ನೊಬ್ಬ ನಿಂದ ಕದ್ದಂತೆ. ಈ ಅರ್ಥದಲ್ಲಿ ನಾವೆಲ್ಲರೂ ಈ ಸಮಾಜದ ಏರು-ಪೇರುಗಳಿಗೆ ಕಾರಣರಾದ ಕಳ್ಳರು" ಇದು ಗಾಂಧೀಜಿ ಯವರು ಅಸಂಗ್ರವನ್ನು ಕುರಿತು ಹೇಳಿದ ಮೌಲ್ಯಾಧಾರಿತವಾದ ನುಡಿ ಮುತ್ತುಗಳು.

ಇಂದು ಕಷ್ಟಪಡದೆ ಬೆವರು ಸುರಿಸದೆ ಸುಖವನ್ನು ಬಯಸುವವರ ಸಂಖ್ಯೆ ಹೆಚ್ಚಾಗುತ್ತಿದೆ. ಸುಖಪಡಲು ಹಣಬೇಕು. ಆ ಹಣವನ್ನು ಅನ್ಯಾಯದ ಮಾರ್ಗದಲ್ಲಿ ಸಂಪಾದನೆ ಮಾಡುವವರ ಸಂಖ್ಯೆ ದಿನೇ ದಿನೇ ವೃದ್ಧಿಯಾಗುತ್ತಿದೆ. ಸತ್ಯ ಪ್ರಾಮಾಣಿಕತೆಯ ಜಾಗವನ್ನು ಅನ್ಯಾಯ, ಅಪ್ರಾಮಾಣಿಕತೆ, ದುರಾಸೆಗಳು ಆಕ್ರಮಿಸಿ ಕೊಂಡಿವೆ. ಇದರಿಂದ ಸಮಾಜದ ಆರೋಗ್ಯ ಏರುಪೇರಾಗಿದೆ. ಕುಟುಂಬದಲ್ಲಿ, ಸಮಾಜದಲ್ಲಿ ನೆಮ್ಮದಿ, ಶಾಂತಿ ದೊರೆಯ ಬೇಕಾದರೆ ಆಯ್ದಕ್ಕಿ ಲಕ್ಕಮ್ಮನಂತಹ ಆದರ್ಶ ಗೃಹಿಣಿ ಬೇಕಾಗಿ ದ್ದಾರೆ. ಕಾಯಕದಿಂದ ಬಂದದ್ದು ಮಾತ್ರ ಶಿವನಿಗರ್ಪಿತ ಎಂದು

ನಂಬಿ ಅನುಷ್ಠಾನಕ್ಕೆ ತಂದದ್ದು ಲಕ್ಕಮ್ಮನಂತಹ ದಿಟ್ಟ ಮಹಿಳೆಯ ಆದರ್ಶ ಇಂದಿನ ಗೃಹಿಣಿಯರಿಗೆ ದಾರಿದೀಪವಾಗಿದೆ. ಆಕಾಶದಲ್ಲಿ ಬೆಳ್ಳಿ ನಕ್ಷತ್ರ ಮಿನುಗುವಂತೆ ಇಪ್ಪತ್ತನೇ ಶತಮಾನದಲ್ಲೂ ಲಕ್ಕಮ್ಮನಂತಹ ಮಹಿಳೆಯನ್ನು ಕಾಣುತ್ತೇವೆ ಎಂಬುದಕ್ಕೆ ಕಳೆದ ಹತ್ತು ವರ್ಷಗಳ ಹಿಂದೆ ಕನ್ನಡ ದಿನಪತ್ರಿಕೆಯ ಮುಖಪುಟದಲ್ಲಿ ಪ್ರಕಟವಾದ ಸುದ್ದಿಯನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಅಧರ್ಮದಿಂದ, ಅನ್ಯಾಯದಿಂದ ತನ್ನ ಪತಿ ಸಂಪಾದಿಸಿದ ೧೩ ದಶಲಕ್ಷ ಇಟಲಿಯ ಕರೆನ್ಸಿಯನ್ನು ರೋಮ ಮಹಿಳೆಯೊಬ್ಬಳು ಮಹಡಿಯ ಮೇಲಿಂದ ಬೀದಿಗೆಸೆದ ಪ್ರಸಂಗ ಆಶ್ಚರ್ಯವನ್ನು ತರುವಂತಹುದು. ಸುಮಾರು ಹತ್ತುಸಾವಿರ ಡಾಲರ್‌ಗೆ ಸಮನಾದ ಈ ಹಣವನ್ನು ಬೀದಿಗೆಸೆದು ವಿಷಯವನ್ನು ಪೊಲೀಸರಿಗೆ "ನನ್ನ ಪತಿಯು ಅಕ್ರಮ ಮಾರ್ಗಗಳಿಂದ ಸಂಪಾದಿಸಿದ ಹಣ ಇದು ಎಂದ ನನಗೆ ಖಾತರಿಯಾದುದರಿಂದ ಬೀದಿಗೆಸೆದೆ' ಎಂದು ದೂರವಾಣಿಯ ಮೂಲಕ ತಿಳಿಸುವ ದಿಟ್ಟತನವನ್ನು ತೋರುತ್ತಾಳೆ. ಈ ಪ್ರಸಂಗವನ್ನು ಗುಮನಿಸುವಾಗ ನಮಗೆ ಥಟ್ಟನೆ ಆಯ್ದಕ್ಕಿ ಲಕ್ಕಮ್ಮ ನೆನಪಿಗೆ ಬರುತ್ತಾಳೆ. ಮಹಿಳೆಯರು ಜಾಗೃತರಾದರೆ, ಲಕ್ಕಮ್ಮನ ಜೀವನವನ್ನು ಆದರ್ಶವಾಗಿಟ್ಟು ಕೊಂಡರೆ ಸತ್ಯ ಶುದ್ಧ ಕಾಯಕದ ಮೇಲೆ ಉತ್ತಮ ಸಮಾಜವನ್ನು ನಿರ್ಮಿಸಲು ಕೊಂಚ ಮಟ್ಟಿಗಾದರೂ ಸಾಧ್ಯವಾಗುತ್ತದೆ.

ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಅಗತ್ಯವಿರುವಷ್ಟನ್ನು ಮಾತ್ರತೆಗೆದುಕೊಂಡರೆ ಸಮಾನತೆ ಕಾಣಿಸಿಕೊಳ್ಳುತ್ತದೆ. ಎಲ್ಲಿ, ಯಾವ ಸಮಾಜದಲ್ಲಿ ಅಸಮಾನತೆ ಇರುತ್ತದೆಯೋ ಅಲ್ಲಿ ಘರ್ಷಣೆ, ವಿರಸ, ಉಂಟಾಗುತ್ತದೆ. ಪ್ರತಿಯೊಬ್ಬರಿಗೂ ಧನಧಾನ್ಯಗಳು ಸಮನಾಗಿ ವಿತರಣೆಯಾದರೆ ಯಾರು ಹಸಿವೆಯಿಂದ ಸಾಯಬೇಕಾಗಿಲ್ಲ, ಅರೆ ಬೆತ್ತಲೆ ತಿರುಗಬೇಕಾಗಿಲ್ಲ ಎಂದು ಗಾಂಧೀಜಿಯವರು ಹೇಳಿದ್ದಾರೆ.

ಮಾರಯ್ಯನ ವಚನದ ಕೊನೆಯ ಎರಡು ಸಾಲುಗಳು "ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದರೂ ಕಾಯದೊಳಗು" ನುಡಿಯನ್ನು ಗಮನಿಸ ಬೇಕು. ಶರಣರು ಕಾಯಕವೇ ಕೈಲಾಸ ಎಂದು ಸಾರಿ ಕೈಲಾಸಕ್ಕಿಂತ ಕಾಯಕಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟರು. ಹೂಗಾರ ಮಾದಯ್ಯನ ಕಾಯಕ ನಿಷ್ಠೆಯನ್ನು ಮೆಚ್ಚಿದ ಶಿವ ಜಂಗಮವೇಷಧಾರಿಯಾಗಿ ಬಂದು ಕೈಲಾಸಕ್ಕೆ ಕರೆದುಕೊಂಡು ಹೋಗಿ ಗಣಪದವಿಯನ್ನು ನೀಡುತ್ತೇನೆಂದರೂ ಆಮಿಷಕ್ಕೆ ಒಳಗಾಗದೆ ನಿನ್ನ ಕೈಲಾಸಕ್ಕಿಂತ ಕಾಯಕ ಮಾಡುವ ಈ ಭುವಿಯೇ ಕೈಲಾಸ ಎಂದು ಗಣ ಪದವಿಯನ್ನು ಧಿಕ್ಕರಿಸಿದ ಮಹಾಶರಣ. ಬಸವಾದಿ ಶರಣರು ಕಾಯಕದಿಂದಲೇ ಜೀವನ್ಮುಕ್ತಿ, ಎಲ್ಲಿ ಕಾಯಕ ಇಲ್ಲವೋ ಅಲ್ಲಿ ಶರಣರಿಗೆ ಸ್ಥಾನವಿಲ್ಲ, ಕಾಯಕದಿಂದ ಹೊರತಾದ ವ್ರತ ನಿಯಮಗಳನ್ನು ಅವರು ಒಪ್ಪುತ್ತಿರಲಿಲ್ಲ. ಬಾಚಿಕಾಯಕದ ಬಸವಯ್ಯನ ಪತ್ನಿ ಕಾಳವ್ವೆಯ ವಚನವೊಂದರಲ್ಲಿ ಯಾವುದೇ ವ್ರತನಿಯಮಗಳಿಗಿಂತ ಕಾಯಕವೇ ಶ್ರೇಷ್ಠವಾದುದು ಎಂಬದನ್ನು ತಿಳಿಸುತ್ತಾಳೆ.

*"ಕಾಯಕ ತಪ್ಪಿದರೆ ಸೈರಿಸಬಾರದು*
*ವ್ರತ ತಪ್ಪಿದರೆಂತು ಸೈರಿಸಬಾರದು*
*ಕರ್ಮಹರ ಕಾಳೇಶ್ವರ"*

ಆರ್ಥಿಕ ಸಮಾನತೆಯ ಮುಖ್ಯ ಉದ್ದೇಶದಡಿಯಲ್ಲಿ ಶರಣರು ತಮ್ಮ ಕಾಯಕದ ಮಹತ್ವವನ್ನು ಪರಿಪರಿಯಾಗಿ ಹೇಳುತ್ತಿರುವುದರ ಅರ್ಥ ದುಡಿಮೆಯಿಲ್ಲದೆ ಯಾವ ಸಮಾಜದಲ್ಲೂ ಜೀವಿಸುವುದಕ್ಕೆ ಸಾಧ್ಯವಿಲ್ಲವೆಂಬುದೇ ಆಗಿದೆ. ಇನ್ನು ಕೊನೆಯ ಸಾಲು 'ಅಮರೇಶ್ವರ ಲಿಂಗವಾದರೂ ಕಾಯಕದೊಳಗು' ಎನ್ನುವಲ್ಲಿ ಲಿಂಗವೂ ಕಾಯಕಮಾಡಬೇಕು ಎಂಬುದು ಮಾತ್ರವಲ್ಲದೆ ಕಾಯಕವಿದ್ದಲ್ಲಿ ಲಿಂಗವಿರುತ್ತದೆ ಅಥವಾ ಬರುತ್ತದೆ ಎಂಬುದು ಅರಿವಾಗುತ್ತದೆ.

## ಆಕರ ಗ್ರಂಥಗಳು


ವೀರಶೈವ ಸಂಸ್ಕೃತಿ : ಡಾ. ಎಚ್. ತಿಪ್ಪೇರುದ್ರಸ್ವಾಮಿ ಪ್ರ. ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ ಮೂರು ಸಾವಿರ ಮಠ ಹುಬ್ಬಳ್ಳಿ, (೧೯೭೫).

ವಚನ ಚಿಂತನ : ಸಂ. ಗೊ.ರು. ಚನ್ನಬಸಪ್ಪ, ಪ್ರ. ಶ್ರೀ ಸರ್ವಭೂಷಣ ಶಿವಯೋಗಿಗಳ ಮಠ, ಬೆಂಗಳೂರು, (೧೯೯೪).

ಉಪನ್ಯಾಸ ಸಂಚಯ : ಸಂ. ಟಿ.ಆರ್. ಮಹಾದೇವಯ್ಯ, ಲೇಖನ : ಗುರು-ಲಿಂಗ- ಜಂಗಮ, ಡಾ. ಎಂ. ಚಿದಾನಂದಮೂರ್ತಿ. ಪ್ರ. ಶ್ರೀ ಸರ್ವಭೂಷಣ ಶಿವಯೋಗಿಗಳ ಮಠ, ಬೆಂಗಳೂರು, (೧೯೯೧).

ಶರಣತತ್ವ ಚಿಂತನ : ಸಂ. ಡಾ. ಎ.ಎಲ್. ಶಿವರುದ್ರಪ್ಪ, ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು, (೧೯೮೭).

ದಲಿತವರ್ಗದ ಶರಣರು ಮತ್ತು ಶರಣೆಯರು : ಒಂದು ಅಧ್ಯಯನ, ಡಾ. ಮ.ನ. ಜವರಯ್ಯ, ಪ್ರ. ಸಿದ್ಧಾರ್ಥಿ ಗ್ರಂಥಮಾಲೆ, ಮೈಸೂರು, (೧೯೯೯).

ಮಹಾಮನೆ : ಸಂಪುಟ ೩, ಸಂಚಿಕೆ ೪, ಪುಟ ೩, ನವೆಂಬರ್, ೨೦೦೦, ಸಂ. ಎಂ.ಜಿ. ನಾಗರಾಜ್, ಎಚ್.ಎಸ್. ಸಿದ್ಧಗಂಗಪ್ಪ, ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಶರಣ ಶ್ರೀಗಳು, ೮ನೇ ಬ್ಲಾಕ್, ಜಯನಗರ, ಬೆಂಗಳೂರು – ೮೨.






# ವಚನಗಳ ವಿಶ್ಲೇಷಣೆ

*ಅಂದು, ಇಂದು, ಮತ್ತೊಂದೆನಬೇಡ!*
*ದಿನವಿಂದೇ ಶಿವ ಶರಣೆಂಬುವಂಗೆ!*
*ದಿನವಿಂದೇ ಹರ ಶರಣೆಂಬವಂಗೆ!*
*ದಿನವಿಂದೇ ನಮ್ಮ ಕೂಡಲಸಂಗನ*
*ಮಾಣದೆ ನೆನೆವಂಗೆ!*

ದೇವರನ್ನು ಭಜಿಸಿ ದಿವ್ಯಜೀವನವನ್ನು ಆರಂಭಿಸಲು ದಿನಘಳಿಗೆಯ ಗುಣಿತ ಗಣಿತಗಳೇಕೆ? ಇಂದು-ನಾಳೆ-ನಾಡಿದೆನ್ನಬೇಡ. ಮಕ್ಕಳಾಗಲಿ, ಅವರಿಗೆ ಮದುವೆಯಾಗಲಿ, ಮೊಮ್ಮಕ್ಕಳ ಮುದ್ದು ಮುಖ ನೋಡೋಣ ಎಂದು – ಆಧ್ಯಾತ್ಮಿಕ ಜೀವನಾರಂಭೋತ್ಸವವನ್ನು ಮುಂದೂಡುತ್ತ ಕಾಲವಂಚನೆ ಮಾಡುವುದೇಕೆ? ಸಂಸಾರವನ್ನು ಬಿಡುವುದರಿಂದ ವಿಯೋಗವಾದೀತೇ ಹೊರತು ಯೋಗ ಹೇಗಾದೀತು? ಸಂಸಾರವು ಯೋಗದ ನೆಲಗೇರಿದರೆ ಆಗ ಆ "ಸಂ-ಸಾರ"ವೂ ಪೂರ್ಣ ಯೋಗವಾದೀತು! ದಿವ್ಯಜೀವನವು ಒಂದು ನಿರಂತರ-ನಿತ್ಯ-ಉತ್ತಮ-ಧ್ಯಾನಕ್ರಿಯೆ! ಅದನ್ನಿಂದೇ ಈಗಲೇ ಆರಂಭಿಸು.

*ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ!*
*ರಾಶಿ-ಕೂಟ, ಋಣ-ಸಂಬಂಧ ಉಂಟೆಂದು ಹೇಳಿರಯ್ಯ!*
*ಚಂದ್ರಬಲ-ತಾರಾಬಲ ಉಂಟೆಂದು ಹೇಳಿರಯ್ಯ!*
*ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ!*
*ಕೂಡಲಸಂಗಮದೇವರ ಪೂಜಿಸಿದ ಫಲ ನಿಮ್ಮದಯ್ಯ!*

ಪೂಜೆ-ಪುಣ್ಯಕಾರ್ಯಗಳನ್ನು ಮಾಡುವ ಮನಸ್ಸಾದರೆ ಅದನ್ನು ಮಾಡಲು ಶುಭದಿನ ಯಾವುದು, ಅಮೃತಘಳಿಗೆ ಯಾವುದೆಂದು ಚಿಂತಿಸಿ, ದಿಕ್ಕುಗೆಟ್ಟು, ಪುರೋಹಿತರ ಬಳಿಗೆ ಓಡಬೇಡ. ಪುಣ್ಯಕಾರ್ಯ ಮಾಡಬೇಕೆಂಬ ಬಯಕೆ ನಿನ್ನ ಮನಸ್ಸಿನಲ್ಲಿ ಮೊಳೆದ ಘಳಿಗೆಯೇ ಶುಭಘಳಿಗೆ! ಅದಕ್ಕೂ ನಿನಗೂ ಋಣ ಸಂಬಂಧವುಂಟು! ಅದನ್ನು ನಿರ್ವಹಿಸುವ ಚಂದ್ರಬಲ ತಾರಾಬಲ ಸರ್ವಬಲವೂ ನಿನ್ನಲ್ಲಿರುವುದು! ನಾಳೆಯೆನ್ನಬೇಡ, ತಡಮಾಡಬೇಡ. ನಾಳೆಗಿಂತ ಇಂದಿನ ದಿನವೇ ಎಂದೆಂದಿಗೂ ಲೇಸು. ಪವಿತ್ರವಾದುದನ್ನು ಮಾಡುವವನು ನೀನೇ, ಅದರ ಫಲ ನಿನ್ನದೇ – ಈ ಸಂಬಂಧವಾಗಿ ಇನ್ನೊಬ್ಬರನ್ನು ಕೇಳುವುದೇನಿದೆ? ಕಾಲಲಬ್ಧಿಗಾಗಿ ಕಾಯುವುದೇನಿದೆ?

*ಆಡಿದರೇನೋ? ಹಾಡಿದರೇನೋ? ಓದಿದರೇನೋ?*
*ತ್ರಿವಿಧ ದಾಸೋಹವಿಲ್ಲದನ್ನಕ್ಕ!*
*ಆಡದೇ ನವಿಲು? ಹಾಡದೇ ತಂತಿ? ಓದದೇ ಗಿಳಿ?*
*ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ!*

ಶಿವನ ಮತ್ತು ಶಿವಭಕ್ತರ ಕಥಾಪ್ರಸಂಗಗಳನ್ನು ಅಭಿನಯಿಸಿ ಕುಣಿದಾಡಬಹುದು. ಆದ್ಯರ ವಚನ-ಗೀತೆ-ಶಿವಗೀತೆ-ಹರನಾಮ ಸಂಕೀರ್ತನೆಗಳನ್ನು ಹಾಡಬಹುದು. ವೇದ-ಆಗಮ-ಉಪನಿಷತ್ತುಗಳನ್ನು ಓದಬಹುದು! ಅಷ್ಟರಿಂದ ಅಂತರಾತ್ಮನ ಮೇಲೆ ಆದ ಸಂಸ್ಕಾರವೇನು? ಗುರುಕಾರ್ಯಕ್ಕೆ ತನುವನ್ನು ತೇಯದೆ, ಸುಂದರ ಶಿವಚಿಂತನೆಗೆ ಮನವೀಯದೆ, ಜಂಗಮಜಗತ್ತಿಗೆ ಕಾಯಕದಿಂದಾರ್ಜಿಸಿದ ಧನಧಾನ್ಯವನ್ನು ವಿತರಣೆ ಮಾಡದೆ – ಏನು ಮಾಡಿದರೇನು? ನವಿಲು ಕುಣಿಯುವುದಿಲ್ಲವೆ? ತಂತಿ ಹಾಡುವುದಿಲ್ಲವೆ? ಗಿಳಿ ಓದುವುದಿಲ್ಲವೇ? ಮನುಷ್ಯನು ಸಾಧಿಸಬೇಕಾದುದು ವೀಣೆ-ಪ್ರಾಣಿಗಳಿಗೆ ಸಾಧ್ಯವಾದಷ್ಟನ್ನು ಮಾತ್ರವೇ ಏನು? ಅವು ಸಾಧಿಸಲಾರದ ಕಾಯಕಸಹಿತ ಭಕ್ತಿಯನ್ನು ಸಂಪಾದಿಸಿದಾಗ ಮಾತ್ರ ಮಾನವರಿಗೆ ಮಾನ ಬಂದೀತು. ಹಾಗಲ್ಲದೆ ಅವರನ್ನು ದೇವರು ಒಲ್ಲ.

*ಎಲವೋ ಎಲವೋ ಪಾಪಕರ್ಮವ ಮಾಡಿದವನೇ,*
*ಎಲವೋ ಎಲವೋ ಬ್ರಹ್ಮಹತ್ಯವ ಮಾಡಿದವನೇ*
*ಒಮ್ಮೆ ಶರಣೆನ್ನೆಲವೋ!*
*ಒಮ್ಮೆ ಶರಣೆಂದರೆ ಪಾಪಕರ್ಮ ಓಡುವುದು!*
*ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಗಳೆಯ್ದುವು*
*ಒರ್ವಂಗೆ ಶರಣೆನ್ನು ನಮ್ಮ ಕೂಡಲ ಸಂಗಮದೇವಂಗೆ!*

ನಾನು ಆ ಪಾಪಕಾರ್ಯ ಮಾಡಿದೆ, ಈ ಪಾಪಕಾರ್ಯ ಮಾಡಿದೆ, ಇನ್ನು ಮುಂದೆ ಪುಣ್ಯಕಾರ್ಯ ಮಾಡಿದರೂ – ಇದುವರೆಗೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಸಿ ಕೊಳ್ಳದೆ ನನಗೆ ಸದ್ಗತಿಯಿಲ್ಲವೆಂದು ನೀವು ಉದ್ವೇಗಪಡಬೇಡ. ನೀನು ಪಾಪ ಮಾಡಿರುವುದು ಈ ಜನ್ಮದಲ್ಲಿ ಮಾತ್ರವೇನು? ಹಿಂದಿನ ಜನ್ಮದಲ್ಲಿ, ಅದಕ್ಕೆ ಹಿಂದಿನ ಜನ್ಮದಲ್ಲಿ ಮಾಡಿಲ್ಲವೇನು? ಆ ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪಗಳನ್ನೆಲ್ಲ ಕಳೆದುಕೊಳ್ಳಲು ಯಾವ ಅಯ್ಯನವರಿಗೆ ಏನು ದಾನ ಮಾಡಲಿ, ಯಾರಿಂದ ಯಾವ ಯಜ್ಞಯಾಗ ಮಾಡಿಸಲಿ ಎಂದು ಶಾಸ್ತ್ರಗಳಲ್ಲಿ ವ್ಯವಹರಿಸ ತೊಡಗಿದರೆ, ಆ ವಿಧವಾದ ವೆಚ್ಚಕ್ಕೆ ನಿನ್ನಲ್ಲಿ ದುಡ್ಡು ಬೆಟ್ಟಗಳಷ್ಟಿದ್ದರೂ ಸಾಲದಾಗುವುದು. ಮೇಲಾಗಿ ನಿನ್ನ ಅಂತರಂಗದ ಶುದ್ಧಿಗಾಗಿ ಈ ಬಹಿರಾಚರಣೆಗಳಿಂದ ಪ್ರಯೋಜನವೇನು? ನೀನು ಹಿಂದೆ ಬ್ರಹ್ಮಹತ್ಯದಂತಹ ಘೋರ ಪಾಪವನ್ನೇ ಮಾಡಿರು, ಅದಕ್ಕೇಕೆ ಎದೆಗುಂದುವೆ, ಹಿಂದೆ ಮಾಡಿದ್ದು ತಪ್ಪಾಯಿತು, ಇನ್ನು ಮಾಡೆನೆಂದು ನಿಶ್ಚಯಿಸಿ, ಮಾಡದಂತಿರಿಸೆಂದು ದೇವರಿಗೆ ಶರಣು ಹೋಗು ಸಾಕು. ಪಶ್ಚಾತ್ತಾಪದಿಂದ ಶಿವನ ಹೆಸರನ್ನೊಮ್ಮೆ ಉಚ್ಚರಿಸು, ಸಾಕು. ನೀನು ಸರ್ವಪಾಪಗಳಿಂದ ಬಿಡುಗಡೆ ಹೊಂದುವೆ.

– ಸಂ. ಡಾ. ಎಲ್. ಬಸವರಾಜು

*(ಕೃಪೆ : ಬಸವ ವಚನಾಮೃತ)*



# ಅಪರಾಧ ತಡೆ : ಕಾನೂನಿನಲ್ಲಿರುವ ಅವಕಾಶಗಳು

ಭಾಗ – ೮

– ಡಾ. ಡಿ.ವಿ. ಗುರುಪ್ರಸಾದ್, ಐ.ಪಿ.ಎಸ್.,
ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ
ನಂ. ೫, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು – ೧

**ಪೊ**ಲೀಸರಿಗೆ ಕೊಟ್ಟಿರುವ ಅತಿ ಮುಖ್ಯ ಜವಾಬ್ದಾರಿ ಅಪರಾಧ ತಡೆಗಟ್ಟುವಿಕೆ. ಕಾನೂನಿನಲ್ಲಿ ಅಪರಾಧಗಳನ್ನು ತಡೆಯಲು ಪೊಲೀಸರಿಗೆ ಹಲವಾರು ಅಧಿಕಾರಗಳನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಪರಿಚಯಮಾಡಿಕೊಡಲಾಗಿದೆ.

ಯಾವುದೇ ವ್ಯಕ್ತಿಯು ಸಂಶಯಾಸ್ಪದ ರೀತಿಯಲ್ಲಿ ಚಲನ-ವಲನ ಮಾಡುತ್ತಿದ್ದರೆ ಅಂತಹವನನ್ನು ಬಂಧಿಸಿ ಪ್ರಶ್ನಿಸುವ ಅವಕಾಶ ಪೊಲೀಸರಿಗೆ ಇದೆ. ಹಿಂದಿನ ಲೇಖನಗಳಲ್ಲಿ ತಿಳಿಸಿದಂತೆ ಯಾವನೇ ವ್ಯಕ್ತಿಯು, ಸಂಶಯ ಬಂದ ಪೊಲೀಸರು ಕೇಳಿದಾಗ ತನ್ನ ಹೆಸರು ಹಾಗೂ ವಿಳಾಸವನ್ನು ಸರಿಯಾಗಿ ಕೊಡದಿದ್ದರೆ ಅವನನ್ನು ಪೊಲೀಸರು ಬಂಧಿಸಬಹುದು. ಅದೇ ರೀತಿ ಯಾವನೇ ವ್ಯಕ್ತಿಯು ತನ್ನ ಬಳಿಯಲ್ಲಿ ಕನ್ನ ಹಾಕುವ ಸಾಮಗ್ರಿಗಳನ್ನು ಇಟ್ಟುಕೊಂಡಿದ್ದರೆ ಅಂತಹವನನ್ನು ಬಂಧಿಸಬಹುದಾಗಿದೆ. ಇದರಿಂದ ಅವನು ಮಾಡಲು ಉದ್ದೇಶಿಸಿರುವ ಅಪರಾಧವನ್ನು ತಡೆಯಬಹುದಾಗಿದೆ.

ದಂಡ ಪ್ರಕ್ರಿಯಾ ಸಂಹಿತೆಯ ಕಲಂ ೧೦೯ರಲ್ಲಿ ಒಬ್ಬ ವ್ಯಕ್ತಿಯು Cognisable (ಕಾಗ್ನಿಸಬಲ್) ಅಪರಾಧವನ್ನು ಮಾಡುತ್ತಾನೆ ಎನ್ನುವ ಸಂಶಯ ಪೊಲೀಸರಿಗೆ ಉಂಟಾದಾಗ ಅವನನ್ನು ಪ್ರತಿಬಂಧಿಸಬಹುದು ಎಂದು ತಿಳಿಸಲಾಗಿದೆ. ಈ ಕಲಮ್ ಪ್ರಕಾರ ಯಾವನೇ ಒಬ್ಬ ವ್ಯಕ್ತಿಯು ತನ್ನ ಇರುವಿಕೆಯನ್ನು ಬಚ್ಚಿಟ್ಟುಕೊಳ್ಳುತ್ತಿದ್ದರೆ ಮತ್ತು ಆ ರೀತಿ ಬಚ್ಚಿಟ್ಟುಕೊಳ್ಳುವುದು ಒಂದು Cognisable ಅಪರಾಧ ಮಾಡುವ ಉದ್ದೇಶಕ್ಕೆ ಎಂದು ಸಂಬಂಧಿಸಿದ ನ್ಯಾಯಾಧೀಶರಿಗೆ ಮನವರಿಕೆಯಾದರೆ ಸದರೀ ನ್ಯಾಯಾಧೀಶರು ಅಂತಹ ವ್ಯಕ್ತಿಯನ್ನು ಕರೆದು ಅವನಿಗೆ ನೋಟೀಸ್ ನೀಡಿ ಆ ವ್ಯಕ್ತಿಯಿಂದ ಮುಂದಿನ ಒಂದು ವರ್ಷದವರೆಗೆ ತಾನು ಉತ್ತಮ ನಡವಳಿಕೆ ಮಾಡುತ್ತೇನೆ ಎಂದು ಮುಚ್ಚಳಿಕೆ ಬರೆಸಿಕೊಳ್ಳಬಹುದು. ಈ ಅಧಿಕಾರವನ್ನು ಚಲಾಯಿಸುವುದಕ್ಕೆ ಪೊಲೀಸರು ನ್ಯಾಯಾಲಯಕ್ಕೆ ವರದಿಯನ್ನು ಒದಗಿಸಬೇಕಾಗಿದೆ. ಉದಾಹರಣೆಗೆ : 'ಎ' ಎನ್ನುವ ವ್ಯಕ್ತಿ ಅಪರಾಧ ಮಾಡಲು ಹೊಂಚು ಹಾಕುತ್ತಿದ್ದಾನೆ ಎಂದು ಪೊಲೀಸರಿಗೆ ಮಾಹಿತಿ ಬರುತ್ತದೆ. ಅಂತಹ ಸಮಯದಲ್ಲಿ ಪೊಲೀಸರು 'ಎ'ಯನ್ನು ಬಂಧಿಸಿ ಅವನ ವಿರುದ್ಧ ಒಂದು ವರದಿಯನ್ನು ತಯಾರು ಮಾಡಿ ಅವನು Congnisable ಅಪರಾಧ ಮಾಡಲು ಹೊಂಚುಹಾಕುತ್ತಿದ್ದಾನೆ ಎಂದು ನಮೂದಿಸಿ ಅವನನ್ನು ಮ್ಯಾಜಿಸ್ಟ್ರೇಟರ ಮುಂದೆ ಹಾಜರು ಮಾಡುತ್ತಾರೆ. ಆಗ ಮ್ಯಾಜಿಸ್ಟ್ರೇಟರು 'ಎ' ಮೇಲಿನ ಆರೋಪ ಬಲವಾಗಿದೆ ಎಂದು ಮನಗಂಡರೆ ಅವನ ಬಳಿ ಮುಚ್ಚಳಿಕೆ ಬರೆಸಿಕೊಂಡು ಅವನು ಮುಂದೆ ಅಪರಾಧ ಎಸಗದಂತೆ ತಡೆ ಹಾಕುತ್ತಾರೆ.

ಇದೇ ರೀತಿ ಕರ್ನಾಟಕ ಪೊಲೀಸ್ ಅಧಿನಿಯಮದ ಕಲಂ ೯೭ರನ್ವಯ ಯಾವನೇ ವ್ಯಕ್ತಿ ಸೂರ್ಯಾಸ್ತದ ನಂತರ ಹಾಗೂ ಸೂರ್ಯೋದಯದ ಒಳಗೆ ಸಂಶಯ ಬರುವ ರೀತಿಯಲ್ಲಿ ಓಡಾಡುತ್ತಾ ಇದ್ದರೆ ಪೊಲೀಸರು ಅವನನ್ನು ಬಂಧಿಸಿ ಕ್ರಮ ತೆಗೆದುಕೊಳ್ಳುವ ಅಧಿಕಾರ ಹೊಂದಿದ್ದಾರೆ. ಈ ಆರೋಪ ಸಾಬೀತಾದರೆ ಮ್ಯಾಜಿಸ್ಟ್ರೇಟರು ಆರೋಪಿಗೆ ಮೂರು ತಿಂಗಳ ಕಾರಾಗೃಹವಾಸ ನೀಡಬಹುದು.

ಕಲಂ ೯೮ ಕೆ.ಪಿ.ಆಕ್ಟ್ (ಕರ್ನಾಟಕ ಪೊಲೀಸ್ ಅಧಿನಿಯಮ) ಅನ್ವಯ ಒಬ್ಬ ವ್ಯಕ್ತಿ ತನ್ನ ಬಳಿಯಲ್ಲಿ ಇರುವ ವಸ್ತುವಿನ ಸ್ವಾಧೀನತೆಗೆ ಸಮಾಧಾನಕರ ವಿವರಣೆ ನೀಡದಿದ್ದರೆ ಅವನನ್ನು ಬಂಧಿಸಬಹುದು. ಆರೋಪ ಸಾಬೀತಾದರೆ ಮೂರು ತಿಂಗಳ ಕಾರಾಗೃಹವಾಸ. ಉದಾಹರಣೆಗೆ ರಾತ್ರಿ ವೇಳೆ ಒಬ್ಬ ವ್ಯಕ್ತಿ ಒಂದು ವಿ.ಸಿ.ಆರ್. ಒಯ್ಯುತ್ತಾ ಪೊಲೀಸರಿಗೆ ಸಿಕ್ಕುತ್ತಾನೆ. ಆ ವಿಡಿಯೋ ರೆಕಾರ್ಡರ್ ಬಗ್ಗೆ ಪೊಲೀಸರು ಕೇಳಿದ ಪ್ರಶ್ನೆಗೆ ಆತ ಸಮಾಧಾನಕರ ಉತ್ತರ ನೀಡದಿದ್ದರೆ ಆ ವೀಡಿಯೋ ಕಳ್ಳತನದ ಮಾಲು ಎಂದು ಪೊಲೀಸರು ಸಂಶಯಿಸಿ ಆತನನ್ನು ೯೮ ಕೆ.ಪಿ. ಆ್ಯಕ್ಟ್ ಅನ್ವಯ ಬಂಧಿಸಬಹುದು.





ಕಲಂ ೧೦೯, ೯೬, ೯೮ ಸ್ವತ್ತಿಗೆ ಸಂಬಂಧಿಸಿದ ಅಪರಾಧಗಳನ್ನು ತಡೆಯುವಂತಹ ಕಲಂಗಳಾಗಿದ್ದರೆ ಸಾರ್ವಜನಿಕ ಶಾಂತಿ ಭಂಗ ತಡೆಯಲು ರೂಪಿಸಿರುವ ಕಲಂಗಳೇ ಬೇರೆ. ದಂಡ ಪ್ರಕ್ರಿಯಾ ಸಂಹಿತೆಯ ಕಲಂ ೧೦೬ ಮತ್ತು ೧೦೭ರ ಅನ್ವಯ ನ್ಯಾಯಾಧೀಶರು ಕೆಲವು ವ್ಯಕ್ತಿಗಳಿಂದ ಮುಂದಿನ ಮೂರು ವರ್ಷಗಳವರೆಗೆ ಉತ್ತಮ ನಡವಳಿಕೆ ಇಟ್ಟುಕೊಳ್ಳುತ್ತೇನೆಂದು ಬಾಂಡ್ ಬರೆಸಿಕೊಳ್ಳಬಹುದು.

ಕಲಂ ೧೦೬ರನ್ವಯ ಯಾವನಾದರೂ ವ್ಯಕ್ತಿಯು ಹೊಡೆದಾಟ, ಗಲಭೆ, ಬೆದರಿಕೆ ಹಾಕುವುದು ಅಥವಾ ಯಾವುದಾದರೂ ಶಾಂತಿ ಭಂಗ ಮಾಡುವಂತಹ ಆರೋಪದಲ್ಲಿ ಶಿಕ್ಷೆಗೆ ಒಳಗಾದರೆ ಆ ವ್ಯಕ್ತಿಗೆ ಶಿಕ್ಷೆ ವಿಧಿಸುವ ಆದೇಶ ಹೊರಡಿಸುವಾಗಲೇ ಮುಚ್ಚಳಿಕೆಯನ್ನು ಬರೆಸಿಕೊಳ್ಳಬೇಕಾಗುತ್ತದೆ. ಈ ಮುಚ್ಚಳಿಕೆಯು ಶ್ಯೂರಿಟಿಗಳ ಜೊತೆ ಅಥವಾ ಇಲ್ಲದೆಯೇ ಬರೆಸಿಕೊಳ್ಳಬಹುದು. ಶಿಕ್ಷೆಯ ಅವಧಿ ಮುಗಿದ ನಂತರ ಈ ವ್ಯಕ್ತಿ ಅಪರಾಧ ಮಾಡುವುದನ್ನು ತಡೆಯುವುದೇ ಈ ಕಲಂನ ಉದ್ದೇಶ.

ದಂಡ ಪ್ರಕ್ರಿಯಾ ಸಂಹಿತೆ ಕಲಂ ೧೦೭ ಮುಚ್ಚಳಿಕೆ ಪತ್ರವನ್ನು ಕಾರ್ಯಾಂಗ ನ್ಯಾಯಾಧೀಶರು ಬರೆಸಿಕೊಳ್ಳುವ ವಿಧಾನ ಹೇಳುತ್ತದೆ. ಕಾರ್ಯಾಂಗ ನ್ಯಾಯಾಧೀಶರು ಎಂದರೆ ಸರಕಾರವು ತನ್ನ ಕೆಲವು ಅಧಿಕಾರಿಗಳಿಗೆ ಕಾನೂನಿನ ಅಧಿಕಾರ ನೀಡಿರುವ ವ್ಯಕ್ತಿಗಳು, ಅಂದರೆ ತಾಲ್ಲೂಕು ಮ್ಯಾಜಿಸ್ಟ್ರೇಟರು (ತಹಸೀಲ್ದಾರರು), ಸಬ್ ಡಿವಿಜನ್ ಮ್ಯಾಜಿಸ್ಟ್ರೇಟರು (ಅಸಿಸ್ಟೆಂಟ್ ಕಮೀಷನರ್) ಹಾಗೂ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು (ಡೆಪ್ಯೂಟಿ ಕಮಿಷನರ್ – ಪೊಲೀಸ್ ಕಮೀಷನರ್) ಈ ಅಧಿಕಾರಿಗಳು ಮ್ಯಾಜಿಸ್ಟ್ರೇಟರ ಅಧಿಕಾರವನ್ನು ಚಲಾಯಿಸುತ್ತಾರೆ. ಇವರನ್ನು ಕಾರ್ಯಾಂಗ (Executive) ಮ್ಯಾಜಿಸ್ಟ್ರೇಟ್ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಪೊಲೀಸರಿಗೆ ಯಾವುದೇ ಒಂದು ಊರಿನಲ್ಲಿ ಅಥವಾ ಬಡಾವಣೆಯಲ್ಲಿ ಕೆಲವೊಂದು ಜನ ಗುಂಪು ಕಟ್ಟಿಕೊಂಡು ಕೋಮು ವೈಷಮ್ಯ ಇಟ್ಟುಕೊಂಡು ಒಬ್ಬರ ಮೇಲೆ ಒಬ್ಬರು ಹಲ್ಲೆ ಮಾಡಿಕೊಂಡು ಸಾರ್ವಜನಿಕರ ಶಾಂತಿಗೆ ಭಂಗ ತರುತ್ತಾರೆ ಎನ್ನುವ ಸಂಶಯ ಬಂದರೆ ಪೊಲೀಸರು ಎರಡೂ ಗುಂಪುಗಳ ಮೇಲೆ ದಂಡ ಪ್ರಕ್ರಿಯಾ ಸಂಹಿತೆ ಕಲಂ ೧೦೭ರ ಮೇರೆಗೆ ದೂರನ್ನು ದಾಖಲಿಸಿಕೊಂಡು ಎರಡೂ ಗುಂಪುಗಳನ್ನು ಕಾರ್ಯಾಂಗ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸುತ್ತಾರೆ. ಈ ದೂರನ್ನು ವಿಚಾರಣೆ ಮಾಡಿದ ಮ್ಯಾಜಿಸ್ಟ್ರೇಟರು ಆ ಎರಡೂ ಗುಂಪುಗಳ ಬಳಿಯಿಂದ ಉತ್ತಮ ನಡವಳಿಕೆಯ ಬಗ್ಗೆ ಅಂದರೆ ಸಾರ್ವಜನಿಕರ ಶಾಂತಿಯನ್ನು ಭಂಗ ಮಾಡುವಂತಹ ಯಾವುದೇ ಕಾರ್ಯವನ್ನು ತಾವು ಮಾಡುವುದಿಲ್ಲ ಎಂದು ಮುಚ್ಚಳಿಕೆ ಬರೆಸಿಕೊಳ್ಳಬಹುದು.

ಕಲಂ ೧೦೬ ಹಾಗೂ ೧೦೭ಕ್ಕೆ ಇರುವ ಮುಖ್ಯ ವ್ಯತ್ಯಾಸ ಎಂದರೆ ಕಲಂ ೧೦೬ರಲ್ಲಿ ಬಾಂಡ್ ಬರೆಸಿಕೊಳ್ಳುವವರು ನ್ಯಾಯಾಂಗ ಮ್ಯಾಜಿಸ್ಟ್ರೇಟ್ ಆಗಿದ್ದು, ಬಾಂಡು ಬರೆದು ಕೊಡುವ ವ್ಯಕ್ತಿಯು ಅಪರಾಧ ಒಂದರಲ್ಲಿ ಶಿಕ್ಷೆಗೆ ಒಳಗಾಗಿರುತ್ತಾನೆ. ಕಲಂ ೧೦೭ರಲ್ಲಿ ಬಾಂಡ್ ಬರೆದು ಕೊಡುವ ವ್ಯಕ್ತಿಯು ಶಿಕ್ಷೆಗೆ ಒಳಪಟ್ಟಿರಬೇಕಾಗಿರುವುದಿಲ್ಲ ಹಾಗೂ ಬಾಂಡನ್ನು ಬರೆಸಿಕೊಳ್ಳುವವರು ಕಾರ್ಯಾಂಗ ಮ್ಯಾಜಸ್ಟ್ರೇಟರು.

ದಂಡ ಪ್ರಕ್ರಿಯಾ ಸಂಹಿತೆಯ ಕಲಂ ೧೧೦ರನ್ವಯ ಯಾವನಾದರೂ ವ್ಯಕ್ತಿ ಪದೇ ಪದೇ ಅಪರಾಧ ಮಾಡುತ್ತಿದ್ದರೆ ಅಂತಹವನನ್ನು ಬಂಧಿಸಿ ಅವನಿಂದ ಮುಂದೆ ಅಪರಾಧ ಮಾಡುವುದಿಲ್ಲ ಎಂದು ಮುಚ್ಚಳಿಕೆ ಬರೆಸಿಕೊಳ್ಳಬಹುದು. ಯಾರಾದರೂ ಒಬ್ಬ ವ್ಯಕ್ತಿ ಸ್ವಭಾವತಃ ಮನೆಕಳ್ಳತನ, ಕಳ್ಳತನ, ಜಬರಿ ಕಳವು, ಪೋರ್ಜರಿ ಮಾಡುತ್ತಿದ್ದರೆ, ಅಥವಾ ಕಳುವಿನ ಮಾಲನ್ನು ಸ್ವೀಕರಿಸುವ ವ್ಯಕ್ತಿಯಾಗಿದ್ದರೆ, ಅಥವಾ ಕಿಡ್ನಾಪಿಂಗ್, ಮೋಸ ಇತ್ಯಾದಿ ಅಪರಾಧಗಳನ್ನು ಪದೇ ಪದೇ ಮಾಡುತ್ತಿದ್ದರೆ ಅಥವಾ ಹಲವಾರು ವಿಶೇಷ ಕಾನೂನುಗಳ ಅನ್ವಯ ಬರುವ ಹಾಗೂ ಐ.ಪಿ.ಸಿಯ ೧೨ನೇ ಅಧ್ಯಾಯದಲ್ಲಿ ಹೇಳಿರುವ ಅಪರಾಧಗಳನ್ನು ಮಾಡುತ್ತಲೇ ಇದ್ದರೆ, ಅಥವಾ ಆ ವ್ಯಕ್ತಿಯ ರಕ್ಷಣೆರಹಿತ ಇರುವಿಕೆ ಸಮಾಜಕ್ಕೆ ತೊಂದರೆ ಉಂಟುಮಾಡಬಹುದಾಗಿದ್ದರೆ ಅಂತಹ ವ್ಯಕ್ತಿಗೆ ನ್ಯಾಯಾಂಗ ಮ್ಯಾಜಿಸ್ಟ್ರೇಟರು ಒಳ್ಳೆಯ ನಡವಳಿಕೆ ಮಾಡುತ್ತೇನೆ ಎಂದು ಮುಚ್ಚಳಿಕೆ ಬರೆದು ಕೊಡಲು ಆದೇಶಿಸಬಹುದು. ಸಾಮಾನ್ಯವಾಗಿ ಪೊಲೀಸರು ಈ ಕಲಂ ಅನ್ನು ರೌಡಿಗಳು ಹಾಗೂ ಇತರ ಸ್ವಭಾವತಃ ಅಪರಾಧವೆಸಗುವ ವ್ಯಕ್ತಿಗಳ ವಿರುದ್ಧ ಬಳಸುತ್ತಾರೆ.

ಅಂದ ಹಾಗೆ ಐ.ಪಿ.ಸಿ. (ಭಾರತೀಯ ದಂಡ ಸಂಹಿತೆ) ಒಬ್ಬ ಆರೋಪಿ ಪದೇ ಪದೇ ಶಿಕ್ಷೆಗೊಳಗಾಗುತ್ತಿದ್ದರೆ ಅಂತಹವನ ಶಿಕ್ಷೆಯನ್ನು ಹೆಚ್ಚು ಮಾಡಬಹುದು ಎಂದು ಹೇಳುತ್ತದೆ.

*(ಮುಂದುವರಿಯುತ್ತದೆ)*

## ಕರ್ನಾಟಕದ ಮುಖ್ಯಮಂತ್ರಿಗಳು

| ಕ್ರಮ ಸಂಖ್ಯೆ | ಹೆಸರು | ಅಧಿಕಾರದ ಅವಧಿ |
|---|---|---|
| | ಶ್ರೀಯುತರುಗಳಾದ : | |
| 1. | ಕೆ. ಚಂಗಲರಾಯ ರೆಡ್ಡಿ | 25-10-1947 ರಿಂದ 30-03-1952 |
| 2. | ಕೆ. ಹನುಮಂತಯ್ಯ | 30-03-1952 ರಿಂದ 19-08-1956 |
| 3. | ಕಡಿದಾಳ್ ಮಂಜಪ್ಪ | 19-08-1956 ರಿಂದ 31-10-1956 |
| 4. | ಎಸ್. ನಿಜಲಿಂಗಪ್ಪ | 01-11-1956 ರಿಂದ 19-04-1957 |
| | | 19-04-1957 ರಿಂದ 16-05-1958 |
| | | 16-05-1958 ರಿಂದ 09-03-1962 |
| 5. | ಬಿ.ಡಿ. ಜತ್ತಿ | |
| 6. | ಎಸ್.ಆರ್. ಕಂಠಿ | 09-03-1962 ರಿಂದ 20-06-1962 |
| 7. | ಎಸ್. ನಿಜಲಿಂಗಪ್ಪ | 21-06-1962 ರಿಂದ 03-03-1967 |
| | | 03-03-1967 ರಿಂದ 29-05-1968 |
| 8. | ವೀರೇಂದ್ರ ಪಾಟೀಲ್ | 29-05-1968 ರಿಂದ 27-03-1971 |
| | ರಾಷ್ಟ್ರಪತಿ ಆಡಳಿತ | 27-03-1971 ರಿಂದ 20-03-1972 |
| 9. | ಡಿ. ದೇವರಾಜ ಅರಸು | 23-03-1972 ರಿಂದ 31-12-1977 |
| | ರಾಷ್ಟ್ರಪತಿ ಆಡಳಿತ | 31-12-1977 ರಿಂದ 28-02-1978 |
| 10. | ಡಿ. ದೇವರಾಜ ಅರಸು | 28-02-1978 ರಿಂದ 07-01-1980 |
| 11. | ಆರ್. ಗುಂಡೂರಾವ್ | 12-01-1980 ರಿಂದ 07-01-1983 |
| 12. | ರಾಮಕೃಷ್ಣಹೆಗಡೆ | 10-01-1983 ರಿಂದ 02-01-1985 |
| | | 08-03-1985 ರಿಂದ 13-02-1986 |
| | | 16-02-1986 ರಿಂದ 11-08-1988 |
| 13. | ಎಸ್.ಆರ್. ಬೊಮ್ಮಾಯಿ | 13-08-1988 ರಿಂದ 21-04-1989 |
| | ರಾಷ್ಟ್ರಪತಿ ಆಡಳಿತ | 21-04-1989 ರಿಂದ 30-11-1989 |
| 14. | ವೀರೇಂದ್ರ ಪಾಟೀಲ್ | 30-11-1989 ರಿಂದ 10-10-1990 |
| | ರಾಷ್ಟ್ರಪತಿ ಆಡಳಿತ | 10-10-1990 ರಿಂದ 17-10-1990 |
| 15. | ಎಸ್. ಬಂಗಾರಪ್ಪ | 17-10-1990 ರಿಂದ 19-11-1992 |
| 16. | ಎಂ. ವೀರಪ್ಪಮೊಯ್ಲಿ | 19-11-1992 ರಿಂದ 10-12-1994 |
| 17. | ಹೆಚ್.ಡಿ. ದೇವೇಗೌಡ | 11-12-1994 ರಿಂದ 31-05-1996 |
| 18. | ಜೆ.ಹೆಚ್. ಪಟೇಲ್ | 31-05-1996 ರಿಂದ 10-10-1999 |
| 19. | ಎಸ್.ಎಂ. ಕೃಷ್ಣ | 11-10-1999 ರಿಂದ |





ನಿಮಗಿದು ತಿಳಿದಿರಲಿ

# ನುಗ್ಗೆಯ ಕಾಯಿ, ಬೆಂಡೆಯ ಕಾಯಿ



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

ನುಗ್ಗೆಯಕಾಯಿಯು ಸಿಹಿ ಮತ್ತು ಒಗರು, ಕಫ ಪಿತ್ತಗಳನ್ನು ಶಾಂತಗೊಳಿಸುವುದು, ಜಠರಾಗ್ನಿಯನ್ನು ಅತಿಶಯವಾಗಿ ವೃದ್ಧಿಗೊಳಿಸುವುದು, ಮತ್ತು ಶೂಲ, ಕುಷ್ಠ, ಕ್ಷಯ, ಉಬ್ಬಸ, ಗುಲ್ಮ, ಈ ರೋಗಗಳನ್ನು ನಾಶಮಾಡುತ್ತದೆ.

★ ನುಗ್ಗೆಯ ಮರದ ಚಕ್ಕೆ ಮತ್ತು ದೇವದಾರುಚಕ್ಕೆ ಇವೆರಡನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುತ್ತಿದ್ದರೆ ಗಂಡಮಾಲೆಯು ಗುಣವಾಗುತ್ತದೆ.

★ ನುಗ್ಗೆಕಾಯಿಯ ಬೀಜ, ಸಾಸಿವೆ, ಅಗಸೇಬೀಜ, ಜವೆ ಗೋಧಿ, ಇವುಗಳನ್ನು ಹುಳಿಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಗಂಡಮಾಲೆ, ಇತರ ವಿಧ ಗಡ್ಡೆಗಳು, ಮತ್ತು ಎಲ್ಲಾ ವಿಧ ಬಾವುಗಳು ಕರಗಿ ಗುಣವಾಗುತ್ತವೆ.

★ ನುಗ್ಗೆಯ ಕಾಯಿಯ ಬೀಜ, ಮತ್ತು ಮೂಲಂಗಿಯ ಬೀಜಗಳನ್ನು ಎಮ್ಮೆಯ ಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಗಂಡಮಾಲೆ ಮತ್ತು ಇತರ ಗಡ್ಡೆಗಳು ಕರಗುತ್ತವೆ.

★ ನುಗ್ಗೆಯ ಬೀಜ, ತುಲಸಿ, ಜವೆಗೋಧಿ, ಮೂಲಂಗಿಯ ಬೀಜ, ಕಣಿಗಲ ಗಿಡದ ಬೇರು, ಇವುಗಳನ್ನು ಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಸಕಲ ವಿಧ ಗಡ್ಡೆಗಳು, ಗಂಡಮಾಲೆ, ಮತ್ತು ಬಾವುಗಳು ಗುಣವಾಗುತ್ತವೆ.

★ ನುಗ್ಗೆಯ ಮರದ ಚಕ್ಕೆ, ದತ್ತೂರಿಯ ಎಲೆ, ಅರಳುಬೇರು, ಕೊಮ್ಮೆಯ ಬೇರು, ಲಕ್ಕಿ-ಸೊಪ್ಪು, ಸಾಸಿವೆ, ಇವುಗಳನ್ನು ಸಮವಾಗಿ ತಂದು ನೀರಿನೊಡನೆ ಅರೆದು ಕುದಿಸಿ ಲೇಪಿಸುವುದರಿಂದ ಆನೆಯ ಕಾಲಿನಂತೆ ಬಾತಿರುವ ಕಾಲಿನ ಬಾವು ಇಳಿದುಹೋಗುತ್ತದೆ.

★ ನುಗ್ಗೆಯ ಬೀಜ, ನುಗ್ಗೆಯ ಸೊಪ್ಪು, ಹಿಪ್ಪಲಿ, ಸೈಂಧವ ಲವಣ, ಶುಂಠಿ, ಹತ್ತಿಯ ಬೀಜ, ಹುರಳಿ, ಎಳ್ಳು, ತುಲಸಿ, ಸಾಸಿವೆ, ಸಬ್ಬಸಿಗೆಯ ಬೀಜ, ಇವುಗಳಲ್ಲಿನ ಸಮಯಕ್ಕೆ ಎಷ್ಟು ಸಿಕ್ಕರೆ ಅಷ್ಟನ್ನೇ ಹುಳಿ ಮಜ್ಜಿಗೆ ಅಥವಾ ನಿಂಬೇಹಣ್ಣಿನ ರಸದಲ್ಲಿ ಅರೆದು ಉಂಡೆಯನ್ನು ಮಾಡಿ ಬಟ್ಟೆಯಲ್ಲಿ ಕಟ್ಟಿ ಕೆಂಡದ ಮೇಲೆ ಬಿಸಿ ಮಾಡಿ ಮೆಲ್ಲನೆ ಬಾವುಗಳಿಗೆ ಶಾಕವನ್ನು ಕೊಡುತ್ತಿದ್ದರೆ ವಾಯು ಸಂಬಂಧಗಳಾದ ಸಕಲವಿಧ ಬಾವುಗಳು ನಿಸ್ಸಂಶಯವಾಗಿ ದೂರವಾಗುತ್ತವೆ.

★ ನುಗ್ಗೆಯ ಎಲೆಯನ್ನು ಶುದ್ಧವಾದ ಎಳ್ಳೆಣ್ಣೆಯಲ್ಲಿ ಸಮಭಾಗವಾಗಿ ಅರೆದು ಏಟು ತಗಲಿದ ಸ್ಥಳಕ್ಕೆ ಹಚ್ಚಿ ಬಿಸಿಲಿನಲ್ಲಿ ಕಾಯಿಸಿದರೆ ಬಾಧೆಯು ಕಡಿಮೆಯಾಗುತ್ತದೆ.

★ ನುಗ್ಗೆಯ ಮರದ ಬೇರನ್ನು ನೀರಿನೊಡನೆ ಅರೆದು ಹಚ್ಚುವುದರಿಂದ ನವೆ, ಹುಳಕಡ್ಡಿ ಮುಂತಾದವುಗಳು ಗುಣವಾಗುತ್ತವೆ.

★ ನುಗ್ಗೆಯ ಮರದ ಚಕ್ಕೆ, ಬೇರು, ಎಲೆ, ಬೀಜ, ಹೂವು ಇವುಗಳನ್ನು ಸಮವಾಗಿ ಸಂಗ್ರಹಿಸಿ ಕುಟ್ಟಿ ರಸವನ್ನು ತೆಗೆದು, ರಸದ ಕಾಲುಪಾಲು ಶುದ್ಧವಾದ ಕರಿ ಎಳ್ಳಿನ ಎಣ್ಣೆಯಲ್ಲಿ ಆ ರಸವನ್ನು ಹಾಕಿ ಕುದಿಸಬೇಕು, ರಸವು ಇಂಗಿ ಎಣ್ಣೆ ಮಾತ್ರ ಉಳಿದ ಮೇಲೆ ಶೋಧಿಸಿಕೊಳ್ಳಬೇಕು. ಇದರ ಲೇಪನದಿಂದ ಎಂತಹ ನವೆಯಾದರೂ ಮಾಯವಾಗುತ್ತದೆ.

★ ನುಗ್ಗೆಯ ಎಲೆಯನ್ನು ನೀರಿನೊಡನೆ ಅರೆದು ಕೆಲವು ಹನಿಗಳನ್ನು ಮೂಗಿಗೆ ಹಿಂಡಿದರೆ ಶೀತದ ತಲೆನೋವು ನಿಲ್ಲುತ್ತದೆ.

★ ನುಗ್ಗೆಯ ಸೊಪ್ಪು ೧ ತೋಲ, ರಾಳ ೨ ತೊಲ, ಸಾಬೂನು ಕಾಲು ತೊಲ, ಆಫೀಮು ೧ ತೊಲ ಇವುಗಳನ್ನು ಕುಟ್ಟಿ ಅರೆದು ೭ ತೊಲ ಎಳ್ಳೆಣ್ಣೆಯಲ್ಲಿ ಹಾಕಿ ಬೇಯಿಸಿ, ಮುಲಾಮಿನಂತೆ ಮಾಡಿ ಇಟ್ಟುಕೊಳ್ಳಬೇಕು. ಇದನ್ನು ವೀಳೆಯ ಎಲೆಗೆ ಹಚ್ಚಿ ನಾರು ಹುಣ್ಣಿಗೆ ಕಟ್ಟಬೇಕು ಮತ್ತು ಪ್ರಾತಃಕಾಲದ ಕಟ್ಟನ್ನು ಸಾಯಂಕಾಲಕ್ಕೆ ತೆಗೆದುಹಾಕಿ ಬೇರೆ ಕಟ್ಟಬೇಕು. ಇದೇ ರೀತಿಯಾಗಿ ಮೂರು ದಿನಗಳವರೆಗೆ ಮಾಡುತ್ತಿದ್ದರೆ ದಾರವು ಪೂರ್ತಿಯಾಗಿ ಹೊರಗೆ ಬಂದುಬಿಡುತ್ತದೆ.

★ ಐದು ತೊಲ ನುಗ್ಗೆಯ ಸೊಪ್ಪನ್ನು ಒಂದು ಸೇರು ನೀರಿನಲ್ಲಿ ಹಾಕಿ ಕುದಿಸಿ ಅರ್ಧ ಸೇರಿಗೆ ಕಷಾಯವನ್ನಿಳಿಸಿ ಶೋಧಿಸಿಕೊಳ್ಳಬೇಕು. ಈ ಕಷಾಯದಲ್ಲಿ ಹುರಿದ ಉರುಳಿಯ ೨ ತೊಲ ನುಚ್ಚನ್ನು ಹಾಕಿ ಕುದಿಸಿ ಒಂದು ಪಾವಿಗಿಳಿಸಿಕೊಂಡು ಕುಡಿಯುವುದರಿಂದ ಬಿಕ್ಕಳಿಕೆ ಮತ್ತು ಉಬ್ಬಸವು ಗುಣವಾಗುತ್ತದೆ.

★ ನುಗ್ಗೆಯ ಎಲೆ ಮತ್ತು ಎಕ್ಕದ ಎಲೆಗಳನ್ನು ಅರೆದು ಲೇಪಿಸುವುದರಿಂದ ಮೂಲವ್ಯಾಧಿಯಲ್ಲಿ ಬರುವ ಮೊಳೆಗಳು ನಾಶವಾಗುವುವು. ಪರೀಕ್ಷಿಸಲ್ಪಟ್ಟಿದೆ.

★ ನುಗ್ಗೆಯ ಬೀಜ, ಬಿದರುಪ್ಪು, ಏಲಕ್ಕಿ, ಕಾಚು, ಮೈಲುತುತ್ತ, ಇವುಗಳನ್ನು ಒಂದೊಂದು ತೊಲ ತಂದು ಕುಟ್ಟಿ ನಿಂಬೆಹಣ್ಣಿನ ರಸದೊಡನೆ ಅರೆದು ಹಚ್ಚಿದರೆ ಮೂಲದ ಮೊಳೆಗಳು ನಾಶವಾಗುತ್ತವೆ.

★ ನುಗ್ಗೆಯ ಬೀಜ, ಹೊಂಗೆಯ ಬೀಜ, ಶುಂಠಿ, ಮೆಣಸು, ಹಿಪ್ಪಲಿ, ಬಿಲ್ವಪತ್ರೆಯ ಮರದ ಬೇರು, ಅರಿಶಿನ, ಮರದರಿಶಿನ, ತುಲಸಿಯ ಎಲೆ ಇವುಗಳನ್ನೆಲ್ಲಾ ಕುಟ್ಟಿ ಆಡಿನ ಮೂತ್ರದಲ್ಲಿ ಅರೆದು ಕಣ್ಣುಗಳಿಗೆ ಅಂಜನವನ್ನು ಹಚ್ಚಿದರೆ ವಿಷದ ವೇಗದಿಂದ ಪ್ರಜ್ಞೆತಪ್ಪಿದವರು ಎಚ್ಚರಗೊಳ್ಳುತ್ತಾರೆ. ಅಥವಾ ಇನ್ನಾವ ಕಾರಣದಿಂದಲೇ ಆಗಲಿ ಪ್ರಜ್ಞೆತಪ್ಪಿದ್ದರೂ ಇದರಿಂದ ಬಹಳ ಉಪಕಾರವಾಗುತ್ತದೆ.

★ ನುಗ್ಗೆಯ ಬೀಜ, ಹಿಪ್ಪೆಯ ಬೀಜ, ವಾಯಿವಿಳಂಗ ಮತ್ತು ಮೆಣಸು, ಎಲ್ಲವನ್ನೂ ಸಮವಾಗಿ ತಂದು ಕುಟ್ಟಿ ಶೋಧಿಸಿಕೊಂಡು ಮೂಗಿಗೆ ಏರಿಸುದರಿಂದ ಹಿಸ್ಟೀರಿಯಾ (ಮೂರ್ಛೆ) ರೋಗದವರಿಗೆ ಬಹಳ ಪ್ರಯೋಜನ ಉಂಟಾಗುತ್ತದೆ.

★ ನುಗ್ಗೆಯ ಎಲೆ ಮತ್ತು ಮೂಲಂಗಿಯ ಎಲೆಯನ್ನು ಅರೆದು ಲೇಪಿಸುವುದರಿಂದ ಮೂಲರೋಗದ ಮೊಳಕೆಗಳು ನಾಶವಾಗುತ್ತವೆ.

★ ನುಗ್ಗೆಯ ಎಲೆ ಮತ್ತು ಬೇವಿನ ಬೀಜಗಳನ್ನು ಸಮಭಾಗವಾಗಿ ಅರೆದು ಅದರಲ್ಲಿ ಕೆಂಡದ ಮೇಲಿಟ್ಟು ಅರಳು ಮಾಡಿದ ಸ್ವಲ್ಪ ಮೈಲುತುತ್ತಿಯನ್ನು ಚೆನ್ನಾಗಿ ಕಲಸಿ ಇಟ್ಟುಕೊಳ್ಳಬೇಕು. ಈ ಮುಲಾಮನ್ನು ಲೇಪಿಸುವುದರಿಂದ ಮೂಲವ್ಯಾಧಿಯ ಮೊಳಕೆಗಳು ಕರಗಿ ಹೋಗುತ್ತವೆ. ಹಚ್ಚತಕ್ಕವರು ಆತುರಪಡಬಾರದು. ಇದನ್ನು ಕೆಲವು ದಿನಗಳವರೆಗೆ ಬಿಡದೆ ಮಾಡಬೇಕು.

★ ನುಗ್ಗೆಯ ಚಕ್ಕೆ ಮತ್ತು ವಾಯಿವಿಳಂಗ ಇವೆರಡನ್ನು ಕುಟ್ಟಿ ಕಷಾಯವನ್ನು ಮಾಡಿ ಅದಕ್ಕೆ ಜೇನುತುಪ್ಪವನ್ನು ಸೇರಿಸಿ ಕುಡಿಯುವುದರಿಂದ ಹೊಟ್ಟೆಯಲ್ಲಿನ ಕ್ರಿಮಿಗಳು ಸಾಯುತ್ತವೆ.

## ಬೆಂಡೆಯ ಕಾಯಿ

★ ಬೆಂಡೆಯ ಕಾಯಿಯು ಬಹಳ ಜಿಗಟಾದುದು. ನಾಭಿಗೆ ತಂಪನ್ನುಂಟುಮಾಡುವುದು, ಬೇಗನೆ ಜೀರ್ಣಿಸುವುದಿಲ್ಲ, ವೀರ್ಯವರ್ಧಕವಾದುದು, ಮಲವನ್ನು ಬಂಧಿಸುವುದು, ಶ್ಲೇಷ್ಮವನ್ನು ಹೆಚ್ಚಿಸುವುದು, ಪೀನಸರೋಗಿಗಳಿಗೂ, ಉಷ್ಣ ಪ್ರಕೃತಿಯವರಿಗೂ, ಮತ್ತು ಮೇಹವ್ಯಾಧಿಯವರಿಗೂ ಹಿತಕರವಾಗಿರುತ್ತದೆ. ವಾತ ಮತ್ತು ಶ್ಲೇಷ್ಮ ಪ್ರಕೃತಿಯವರಿಗೂ ಮತ್ತು ವಾತರೋಗಿಗಳಿಗೂ ಹಿತಕಾರವಾದುದಲ್ಲ.

★ ಬೆಂಡೆಯ ಗಿಡದ ಒಣಗಿರುವ ಬೇರು ೧೦ ತೊಲ, ಒಣಗಿದ ಕೆಂಪುಗೆಣಸು ೧೦ ತೊಲ, ಇವೆರಡನ್ನೂ ಕುಟ್ಟಿ ಶೋಧಿಸಿಕೊಳ್ಳಬೇಕು. ಇದರಲ್ಲಿನ ಅರ್ಧ ಅರ್ಧ ತೊಲ ಚೂರ್ಣವನ್ನು ಮತ್ತು ೧ ತೊಲ ಸಕ್ಕರೆಯನ್ನೂ ಒಂದು ಪಾವು ಹಾಲಿನಲ್ಲಿ ಹಾಕಿ ಪ್ರಾತಃಕಾಲ ಮತ್ತು ಸಾಯಂಕಾಲದಲ್ಲಿ ಕುಡಿಯಬೇಕು. ನೂರಾರು ಔಷಧಿಗಳಿಂದಲೂ ಗುಣವಾಗದಿರತಕ್ಕ ಪ್ರದರ ರೋಗವು ೧೫-೨೦ ದಿನಗಳೊಳಗೆ ಖಂಡಿತ ಗುಣವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

★ ಬೆಂಡೆಯ ಗಿಡದ ಬೇರು ೪ ತೊಲ, ನೆಲ್ಲಿಚಟ್ಟು ೪ ತೊಲ, ಉದ್ದಿನ ಹಿಟ್ಟು ೨ ತೊಲ, ಅತಿಮಧುರ ೨ ತೊಲ, ಶತಾವರಿ ೨ ತೊಲ ಇವುಗಳನ್ನು ಕುಟ್ಟಿ ಶೋಧಿಸಿಕೊಂಡು ಹೊತ್ತಿಗೆ ಅರ್ಧತೊಲದಂತೆ ಬಾಯಿಯಲ್ಲಿ ಹಾಕಿಕೊಂಡು ಮೇಲೆ ಸಕ್ಕರೆಯನ್ನು ಹಾಕಿರುವ ಹಸುವಿನ ಹಾಲನ್ನು ಕುಡಿಯಬೇಕು. ಕೆಂಪು, ಬಿಳುಪು, ಬಣ್ಣಗಳ ಪ್ರದರರೋಗವು ಖಂಡಿತವಾಗಿ ಗುಣವಾಗುತ್ತದೆ. ಅನೇಕ ಸಲ ಪರೀಕ್ಷಿಸಲ್ಪಟ್ಟಿದೆ.

★ ಬೆಂಡೆಯ ಗಿಡದ ಬೇರು ೩ ತೊಲ, ಬಾಳೆಯ ಎಲೆ ೩ ತೊಲ ಇವೆರಡನ್ನು ಅಕ್ಕಿ ತೊಳೆದ ನೀರಿನೊಡನೆ ಅರೆದು ಶೋಧಿಸಿಕೊಂಡು ಕುಡಿಯುವುದರಿಂದ ಸಕಲವಿಧ ಪ್ರದರ ರೋಗಗಳೂ ಬಹು ಬೇಗನೆ ಶಾಂತವಾಗುವುವು. ಪರೀಕ್ಷಿಸಲ್ಪಟ್ಟಿದೆ.

★ ಬೆಂಡೆಯ ಗಿಡದ ಬೇರು ೨ ತೊಲ, ದರ್ಭೆ ಹುಲ್ಲಿನ ಬೇರು ೨ ತೊಲ ಇವೆರಡನ್ನು ಅತ್ತಿಚಕ್ಕೆಯ ರಸದಲ್ಲಿ ಅರೆದು ಸ್ವಲ್ಪ ಜೇನುತುಪ್ಪವನ್ನು ಕೂಡಿಸಿ ಸೇವಿಸಬೇಕು. ಇದರ ಮೇಲೆ ೫ ತೊಲ ಅಕ್ಕಿ ತೊಳೆದು ನೀರನ್ನು ಕುಡಿಯಬೇಕು. ಇದರಿಂದ ಕೆಂಪು, ಬಿಳುಪು ಮುಂತಾದ ಪ್ರದರಗಳು ಶಾಂತವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

❄





# ಶ್ರೀಮಠಕ್ಕೆ ಡಾ. ಯು.ಆರ್. ಅನಂತಮೂರ್ತಿ ಅವರ ಭೇಟಿ



ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಡಾ. ಯು.ಆರ್. ಅನಂತಮೂರ್ತಿ ಅವರಿಂದ ಉಪನ್ಯಾಸ.
ಚಿತ್ರದಲ್ಲಿ : ಸಿದ್ದಗಂಗಾ ಮಾಸಪತ್ರಿಕೆಯ ಸಂಪಾದಕ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರನ್ನು ಕಾಣಬಹುದು.

"ಬಾಲ್ಯದಿಂದಲೂ ನಾನು ಪ್ರಾರ್ಥನೆಯನ್ನು ಮಾಡುತ್ತಿದ್ದವನು, ಆದರೆ ಇಂದು ಪ್ರಾರ್ಥನೆಯ ಮಹತ್ವವನ್ನು ಶ್ರೀಗುರುಗಳ ಸನ್ನಿಧಿಯಲ್ಲಿ ಕಂಡುಕೊಂಡೆನು. *"ಅವರವರ ದರುಶನಕೆ ಅವರವರ ವೇಶದಲಿ ಅವರವರಿಗೆಲ್ಲ ಗುರು ನೀನೊಬ್ಬನೇ"* ಎಂದು ನೀವು ಹಾಡಿದ ಪ್ರಾರ್ಥನಗೀತೆ ಅದೆಷ್ಟು ಸುಂದರ. ಇದನ್ನು ಇಂದು ಆಫ್ಘಾನಿಸ್ತಾನದವರು ಅರ್ಥಮಾಡಿಕೊಂಡಿದ್ದರೆ ಯುದ್ಧವೇ ಆಗುತ್ತಿರಲಿಲ್ಲ. ಶ್ರೀಗುರುಗಳು ನನ್ನ ದೃಷ್ಟಿಯಲ್ಲಿ ಬಸವಣ್ಣನವರೇ ಆಗಿದ್ದಾರೆ. ನಾನೆಲ್ಲೂ ಇಂತಹ ಗುರುಗಳನ್ನು ನೋಡಿಲ್ಲ. ನೀವು ಮಹಾ ಭಾಗ್ಯವಂತರು. ಕಾನ್ವೆಂಟಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ನಿಮಗೆ ಲಭ್ಯವಾಗಿರುವ ಈ ಅವಕಾಶ ಸಾಧ್ಯವಾಗಿಲ್ಲ. ಅವರಿಗಿಂತಲೂ ನೀವು ಪುಣ್ಯವಂತರು. ದಿನವಹಿ ನೀವು ಮಾಡುತ್ತಿರುವ ಪ್ರಾರ್ಥನೆ ನಿಮ್ಮ ಬದುಕನ್ನು ಸುಂದರಗೊಳಿಸಲಿ ನೀವು ಹಾಡಿದ ಬಸವಣ್ಣನವರ ವಚನ **'ವಚನದಲ್ಲಿ ನಾಮಾಮೃತುಂಬಿ'** ಎಂಬುದರ ಕೊನೆಯ ಸಾಲಿನಲ್ಲಿ ಬರುವ **"ನಿಮ್ಮ ಚರಣ ಕಮಲದೊಳಗೆ ಆನು ತುಂಬಿ"** ಎಂಬ ವಚನ ದೇವರಚರಣದಲ್ಲಿ ನಾನು ತುಂಬಿಕೊಂಡಿದ್ದೇನೆ ಎಂದೂ ಆಗುತ್ತದೆ. ದೇವರ ಪಾದವೆಂಬ ಕಮಲದಲ್ಲಿ ದುಂಬಿಯಾಗಿ ಹಾರಾಡುತ್ತಿದ್ದೇನೆ ಎಂಬ ಅರ್ಥ ಬರುತ್ತದೆ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ತುಮಕೂರಿನಲ್ಲಿನಡೆಯುವ ಅಖಿಲ ಭಾರತ ೬೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷ ಡಾ || ಯು.ಆರ್. ಅನಂತಮೂರ್ತಿಯವರು ನುಡಿದರುಯ.

ಅವರು ಫೆಬ್ರವರಿ ೩ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಸಂಜೆ ನಡೆದ ಬೃಹತ್ ಸಾಮೂಹಿಕ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಉಪನ್ಯಾಸ ನೀಡಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ಡಾ. ಅನಂತಮೂರ್ತಿಯವರಿಗೆ ಶಾಲು ಹೊದಿಸಿ ಫಲತಾಂಬೂಲ ನೀಡಿ ಆಶೀರ್ವದಿಸಿದರು.

ಡಾ. ಯು.ಆರ್. ಅನಂತಮೂರ್ತಿಯವರು ವಜ್ರಮಹೋತ್ಸವ ನೆನಪಿನ ನೂತನ ಪ್ರಸಾದ ನಿಲಯಕ್ಕೆ ಭೇಟಿ ನೀಡಿ ಪ್ರಸಾದ ಸ್ವೀಕರಿಸುತ್ತಿದ್ದ ವಿದ್ಯಾರ್ಥಿ ಸಮೂಹವನ್ನು ಕಂಡು ಸಂತೋಷ ವ್ಯಕ್ತಪಡಿಸಿದರು. ಇಂತಹ ಸಾಮೂಹಿಕ ಪ್ರಸಾದ ವ್ಯವಸ್ಥೆ ನೀಡುತ್ತಿರುವ ಪೂಜ್ಯರ ಸೇವಾ ಜೀವನ ಅಪಾರವಾದುದು, ಅನುಪಮವಾದುದು, ಉದಾತ್ತವಾದುದು, ಇತರರಿಗೆ ಮಾರ್ಗದರ್ಶಕವಾದುದು ಎಂದು ನುಡಿದ ಅವರು ಈ ದೃಶ್ಯ ನನ್ನ ಮನಸ್ಸಿನಲ್ಲಿ ಸದಾ ಹಚ್ಚ ಹಸಿರಾಗಿ ಇರುತ್ತದೆ ಎಂದರು.

# ಶ್ರೀ ಅಟವೀ ಸ್ವಾಮಿಗಳು ಹಾಗೂ ಉದ್ದಾನ ಶಿವಯೋಗಿಗಳ ಪುಣ್ಯಸ್ಮರಣೆ



ಪರಮಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ಹಿರೇಮಠದ ಡಾ. ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳವರಿಂದ ''ಪ್ರಸಾದವಾಣಿ'' ಗ್ರಂಥ ಬಿಡುಗಡೆ. ವೇದಿಕೆಯಲ್ಲಿ : ದೇಗುಲ ಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು, ತುರುವೇಕೆರೆ ವಿರಕ್ತ ಮಠದ ಪೂಜ್ಯ ಶ್ರೀ ಶ್ರೀ ಕರಿವೃಷಭ ದೇಶೀಕೇಂದ್ರ ಸ್ವಾಮಿಗಳು, ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಡಾ. ಸಿ. ನಾಗಭೂಷಣ ಹಾಗೂ ಡಾ. ಮಹಾದೇವಿ ಹಿರೇಮಠ ಅವರಿದ್ದಾರೆ.

''ಶಿವಯೋಗಿಗಳು ಲೋಕಕ್ಕೆ ಸುಖಸಂಚಾರಕ್ಕಾಗಿ ಬಂದವರಲ್ಲ. ಲೋಕಜೀವನದ ಅವ್ಯವಸ್ಥೆಯನ್ನು ವ್ಯವಸ್ಥೆಗೊಳಿಸುವುದರತ್ತ ಶ್ರಮಿಸಿದವರು. ಸ್ವಾರ್ಥ ಅವರ ಗುರಿಯಲ್ಲ, ಪರಾರ್ಥ ಅವರ ಧ್ಯೇಯ. ಸಿದ್ಧಗಂಗೆಯ ಸೇವಾ ಜೀವನಕ್ಕೆ ಅಡಿಗಲ್ಲಾದವರು ಲಿಂಗೈಕ್ಯ ಪೂಜ್ಯ ಶ್ರೀ ಅಟವೀಸ್ವಾಮಿಗಳು ಮತ್ತು ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು. ಪೂಜ್ಯರೀವ್ವರೂ ಮೌನ ಕ್ರಾಂತಿಯನ್ನು ಅನ್ನ ಹಾಗೂ ಶಿಕ್ಷಣ ದಾಸೋಹದ ಮೂಲಕ ನಡೆಸಿದವರು. ಜನಸಾಮಾನ್ಯರ ಉದ್ಧಾರಕ್ಕಾಗಿ ದುಡಿದವರು. ಅವರ ಸ್ಮರಣೆ ನಮಗೆ ಶ್ರೀರಕ್ಷೆ ಎಂದೇ ಭಾವಿಸಿದ್ದೇವೆ ಎಂದು'' ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ನುಡಿದರು. ಶ್ರೀ ಶ್ರೀಗಳವರು ದಿನಾಂಕ ೧೪-೧-೨೦೦೨ರಂದು ಶ್ರೀಮಠದಲ್ಲಿ ನಡೆದ ಲಿಂಗೈಕ್ಯ ಶ್ರೀ ಅಟವಿಸ್ವಾಮಿಗಳವರ ಹಾಗೂ ಉದ್ದಾನ ಶಿವಯೋಗಿಗಳ ಪುಣ್ಯಾರಾಧನೆಯ ಸಂದರ್ಭದಲ್ಲಿ ಮೇಲಿನಂತೆ ಆಶೀರ್ವಚನ ನೀಡಿದರು.

ಜ್ಯೋತಿಯನ್ನು ಬೆಳಗಿಸುವುದರ ಮೂಲಕ ಸಮಾರಂಭವನ್ನು ಉದ್ಘಾಟಿಸಿದ ಕನಕಪುರ ದೇಗುಲ ಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು, ''ಸಿದ್ಧಗಂಗಾಮಠ ಶಿವಯೋಗಿದ್ವಯರ ಲೋಕ ಕಮ್ಮಟ; ಲಿಂಕೈಗ್ಯರೀರ್ವರ ಜೀವನ ಉದಾತ್ತವಾದುದು, ಕಾರುಣ್ಯ ಪೂರ್ಣವಾದುದು'' ಎಂದು ಆಶೀರ್ವಚನದಲ್ಲಿ ತಿಳಿಸಿದರು.

''ಮಹಾತ್ಮರನ್ನು ನೆನೆಯುವುದೇ ಘನಮುಕ್ತಿಗೆ ಕಾರಣ ಎನ್ನುತ್ತಾ ಸಿದ್ಧಗಂಗೆಯ ಪೂರ್ವಾಚಾರ್ಯರಾದ ಶ್ರೀ ಅಟವೀ ಸ್ವಾಮಿಗಳನ್ನು ಮತ್ತು ಶ್ರೀ ಉದ್ದಾನ ಶಿವಯೋಗಿಗಳವರನ್ನು ಆರಾಧಿಸುವುದೆಂದರೆ ಶ್ರೇಷ್ಠ ಜೀವನ ಮೌಲ್ಯಗಳನ್ನು







ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ನೇತೃತ್ವದಲ್ಲಿ ನಡೆದ ಶ್ರೀ ಅಟವೀ ಸ್ವಾಮಿಗಳು ಹಾಗೂ ಶ್ರೀ ಉದ್ದಾನ ಶಿವಯೋಗಿಗಳ ಭಾವಚಿತ್ರಗಳ ಪಲ್ಲಕ್ಕಿ ಉತ್ಸವದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಭಕ್ತಾದಿಗಳು

ಆರಾಧಿಸುವುದೆಂದೇ ಅರ್ಥ. ಅದನ್ನು ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳನ್ನು ಪ್ರತ್ಯಕ್ಷಮಾಡಿತೋರಿಸುತ್ತಿದ್ದಾರೆ ಎಂದು ತುರುವೇಕೆರೆಯ ವಿರಕ್ತಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಕರಿವೃಷಭದೇಶಿಕೇಂದ್ರ ಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ತಿಳಿಸಿದರು.

ಶ್ರೀ ಸಿದ್ಧಗಂಗಾ ಪ್ರಕಾಶನ ಹೊರತಂದ ''ಪ್ರಸಾದ ವಾಣಿ'' ಗ್ರಂಥವನ್ನು ಬಿಡುಗಡೆ ಮಾಡಿದ ಹಿರೇಮಠದ ಡಾ. ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳು ತಮ್ಮ ಭಾಷಣದಲ್ಲಿ ''ಸಿದ್ಧಗಂಗಾ ಶ್ರೀಗಳವರ ಪ್ರತಿಯೊಂದು ನುಡಿಯೂ ಪ್ರಸಾದವಾಣಿ ಎಂಬುದನ್ನು ಗ್ರಂಥ ಸ್ಪಷ್ಟಪಡಿಸುತ್ತದೆ. ಶ್ರೀಗಳವರು ಭರತಖಂಡ ಕಂಡ ವಿಭೂತಿ ಪುರುಷರು, ಅವರ ನುಡಿ ಮಂತ್ರ, ಅವರ ನಡೆ ಕಲ್ಯಾಣ, ಅವರ ಚಿಂತನೆ ಶಿವಚಿಂತನೆ. ಆ ಚಿಂತನೆ ರಾಷ್ಟ್ರಚಿಂತನೆ, ರಾಷ್ಟ್ರವೇ ಅವರಿಗೆ ಶಿವವಾಗಿದೆ'' ಎಂದು ನುಡಿದರು.

''ವೀರಶೈವ ಸಾಹಿತ್ಯದಲ್ಲಿ ಪ್ರಸಾದ ಪರಿಕಲ್ಪನೆ'' ಎಂಬ ವಿಷಯವನ್ನು ಕುರಿತು ರಾಯಚೂರು ಸ್ನಾತಕೋತ್ತರ ಕೇಂದ್ರದ ಕನ್ನಡ ಅಧ್ಯಯನ ವಿಭಾಗದ ಪ್ರವಾಚಕರಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ || ಸಿ. ನಾಗಭೂಷಣ ಅವರು ಪ್ರಬಂಧವನ್ನು ಮಂಡಿಸಿದರು.

ಡಾ || ಮಹಾದೇವಿ ಹಿರೇಮಠ್ ಅವರು 'ಬಸವಣ್ಣನವರ ವಚನಗಳಲ್ಲಿ ಮಾನವತಾವಾದ' ಎಂಬ ವಿಷಯವನ್ನು ಕುರಿತ ಪ್ರಬಂಧವನ್ನು ಮಂಡಿಸಿದರು.

ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯನವರು ಸ್ವಾಗತಿಸಿದರು. ವಿದ್ವಾನ್ ಶ್ರೀ ಕೆ. ಬಸವರಾಜು ಅವರು ವಂದನೆ ಸಲ್ಲಿಸಿದರು. ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯನವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಕಾರ್ಯಕ್ರಮವನ್ನು ನಿರೂಪಿಸಿದರು.

ಸಮಾರಂಭಕ್ಕೆ ಮುನ್ನ ಶಿವಯೋಗಿದ್ವಯರ ಭಾವಚಿತ್ರಗಳ ಪಲ್ಲಕ್ಕಿ ಉತ್ಸವ ಸಕಲ ಮಂಗಳಕಲಶ ವಾದ್ಯಗಳೊಂದಿಗೆ ನಡೆಯಿತು. ಕಲಾವಿದ ಶ್ರೀ ಹೆಚ್.ಎಸ್. ನೀಲಕಂಠಯ್ಯ ಅವರ ವೀರಗಾಸೆ ನೃತ್ಯ ಸಮಾರಂಭಕ್ಕೆ ವಿಶೇಷ ಶೋಭೆಯನ್ನು ತಂದುಕೊಟ್ಟಿತು.

ವರದಿ : ಎಂ. ರೇಣುಕಾರಾಧ್ಯ

## ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ

ಪರಮಪೂಜ್ಯ ಶ್ರೀ ಶ್ರೀಗಳವರಿಂದ ವಿದ್ವಾನ್ ಕೋ.ರಂ. ಬಸವರಾಜು ರಚಿಸಿದ ''ಶಿವಾಗಮ ಪ್ರಣೀತ ಗುರು-ಶಿಷ್ಯ ಸ್ವರೂಪ ಕೋಶಃ'' ಕೃತಿ ಬಿಡುಗಡೆ ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಶ್ರೀ ಕವಿತಾಕೃಷ್ಣ ವಿದ್ವಾನ್ ಕೋ.ರಂ. ಬಸವರಾಜು ಹಾಗೂ ಡಾ. ಚಿಕ್ಕಣ್ಣ ಎಣ್ಣೆಕಟ್ಟೆ ಅವರು ಉಪಸ್ಥಿತರಿದ್ದರು.

'ಬಸವಣ್ಣನವರು ಪರಿಪೂರ್ಣಮಾನವತಾ ಪ್ರಜ್ಞಾಶೀಲರು. ಅವರದು ಮಾನವತಾ ಧರ್ಮ. ಸಕಲ ಜೀವರಿಗೆ ಲೇಸನ್ನು ಉಂಟುಮಾಡಿದ ವಿಶಾಲವಾದ ಧರ್ಮ. ಕಾರ್ಯ ದಾಸೋಹ ತತ್ವಗಳು ಸ್ವಾವಲಂಬನೆ ಮತ್ತು ಅರ್ಪಣೆ ಮನೋಧರ್ಮವನ್ನು ರೂಪಿಸುವ ಮಹಾಮಾರ್ಗಗಳು. ಅವರದು ಗುಡಿ ಗುಂಡಾರಗಳ ಧರ್ಮವಾಗಿರಲಿಲ್ಲ. ಹೃದಯ-ಹೃದಯಗಳ ಧರ್ಮವಾಗಿತ್ತು. ಬಸವಣ್ಣನವವರು ಎಲ್ಲಾ ಕಾಲಕ್ಕೂ ಪ್ರಸ್ತುತರು. ಅವರ ತತ್ವಗಳು ಆಧುವಿಕ ಜಗತ್ತಿಗೆ ತುರ್ತು ಅಗತ್ಯಗಳು. ಅವುಗಳಲ್ಲಿ ಜಾತಿ, ಭಾಷೆ, ಹೆಣ್ಣು, ಗಂಡು ಎಂಬ ತಾರತಮ್ಯವಿಲ್ಲ. ಜಗತ್ತಿಗೆ ಎಲ್ಲ ತತ್ವಜ್ಞಾನಿಗಳ ಸಾರವನ್ನು ಬಸವಣ್ಣನವರಲ್ಲಿ ಕಾಣುತ್ತೇವೆ'' ಎಂದು ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ತಮ್ಮ ಆಶೀರ್ವಚನ ನುಡಿಗಳಲ್ಲಿ ತಿಳಿಸಿದರು.

ಅವರು ಜನವರಿ ೧೪ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭದ ಸಾನ್ನಿಧ್ಯವಹಿಸಿ ಆಶೀರ್ವಚನ ನೀಡುತ್ತಿದ್ದರು.

ಸಮಾರಂಭವನ್ನು ಉದ್ಘಾಟಿಸಿದ ಶ್ರೀಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು 'ಬಸವಣ್ಣನವರ ಜೀವನ ಸಂದೇಶ ಮಾನವೀಯತೆಗೆ ಯಶಸ್ಸನ್ನು ತಂದುಕೊಟ್ಟ ಸಂದೇಶ. ಅವರ ವಚನಗಳನ್ನು ಅಧ್ಯಯನ ಮಾಡಿದರೆ ಇಂದಿನ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದು'' ಎಂದು ಹೇಳಿದರು.

ಉಪನ್ಯಾಸ ನೀಡಿದ ಡಾ॥ ಚಿಕ್ಕಣ್ಣಯಣ್ಣೆಕಟ್ಟೆ ಅವರು ಜಗತ್ತು ಕಂಡ ಮೂರು ಜ್ಯೋತಿಗಳು ಬುದ್ಧ, ಬಸವ, ಮತ್ತು ಸಿದ್ಧಗಂಗಾಶ್ರೀಗಳು ಎಂದು ತಿಳಿಸಿ; ಜನಪದ ಸಂಸ್ಕೃತಿಯ ತಾಯಿ ಬೇರಿನಂತೆ ಶ್ರೀಮಠವನ್ನು ಕಟ್ಟಿದವರು ಪೂಜ್ಯ ಶ್ರೀ ಶ್ರೀ







ಸಮಾರಂಭದಲ್ಲಿ ಭಕ್ತರು ಹಾಗೂ ಹರಗುರು ಚರಮೂರ್ತಿಗಳು

ಶಿವಕುಮಾರ ಮಹಾಸ್ವಾಮಿಗಳು. ಅವರ ಗ್ರಾಮಾಂತರ ಬಸವಜಯಂತಿ ಯೋಜನೆ ಒಂದು ಅಪರೂಪದ ಯೋಜನೆ. ಶ್ರೀಮಠದ ಕಲಾವಿದರು ಪ್ರದರ್ಶಿಸುವ ಜಗಜ್ಯೋತಿ ಬಸವೇಶ್ವರ ನಾಟಕ ಬಸವಣ್ಣನವರ ದಿವ್ಯ ಸಂದೇಶವನ್ನು ಅರ್ಥಪೂರ್ಣವಾಗಿ ಬಿತ್ತರಿಸುವಂತೆ ಮಾಡಿದೆ. ಅದೊಂದು ಚಲಿಸುವ ಮುಕ್ತ ವಿಶ್ವವಿದ್ಯಾನಿಲಯ ಎಂದು ಹೇಳಿದರು.

ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಂತ ಕನ್ನಡಾಭಿಮಾನಿ ಮತ್ತೊಬ್ಬರನ್ನು ನಾನು ಕಂಡಿಲ್ಲ ಎನ್ನುತ್ತ ತಮ್ಮ ಉಪನ್ಯಾಸವನ್ನು ಆರಂಭಿಸಿದ ಶ್ರೀ ಕವಿತಾಕೃಷ್ಣ ಅವರು ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಅಭೂತಪೂರ್ವವಾಗಿ ಶ್ರೀಮಠದಲ್ಲಿ ನಡೆಸಿಕೊಟ್ಟ ಮಹಾನುಭಾವರು. ಅಂತೆಯೇ ಕನ್ನಡಭಾಷೆ ಉಳಿವಿಗಾಗಿ ಕನ್ನಡ ಪಂಡಿತ ಶಿಕ್ಷಣ ಸಂಸ್ಥೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಶ್ರೀಗಳವರ ಕನ್ನಡ ಪ್ರೇಮವನ್ನು ಸರ್ಕಾರ, ಶಿಕ್ಷಣತಜ್ಞರು, ಕನ್ನಡದ ಬಗ್ಗೆ ದೊಡ್ಡ ದೊಡ್ಡ ಮಾತನಾಡುವ ರಾಜಕಾರಣಿಗಳು ಅನುಸರಿಸಬೇಕಾಗಿದೆ ಎಂದು ಹೇಳಿದರು.

ವಿದ್ವಾನ್ ಕೋ.ರಂ. ಬಸವರಾಜು ಅವರು ರಚಿಸಿದ ''ಶಿವಾಗಮಪ್ರಣೀತ ಗುರು-ಶಿಷ್ಯ ಸ್ವರೂಪ ಕೋಶಃ'' ಕೃತಿಯನ್ನು ಪೂಜ್ಯ ಶ್ರೀಗಳವರು ಬಿಡುಗಡೆ ಮಾಡಿ ಲೇಖಕರಿಗೆ ಶುಭವನ್ನು ಹಾರೈಸಿದರು.

ಶ್ರೀ ಪಿ.ಎಸ್. ಸಿದ್ಧಗಂಗಯ್ಯನವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ವಿದ್ವಾನ್ ಕೆ. ಬಸವರಾಜು ಅವರು ಸ್ವಾಗತಿಸಿದರು. ಹಳೆಯ ವಿದ್ಯಾರ್ಥಿ ಸಂಘದ ಸಹಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ವಂದನೆ ಸಲ್ಲಿಸಿದರು. ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಕಾರ್ಯಕ್ರಮವನ್ನು ನಿರೂಪಿಸಿದರು.

ಸಮಾರಂಭದ ಅಂಗವಾಗಿ **'ಕಾಯಕ ನಮನ'** ಎಂಬ ಅಥಣಿ ಮುರುಘೇಂದ್ರ ಶಿವಯೋಗಿಗಳವರ ಭಕ್ತಿ ಆಧಾರಿತ ರೂಪಕವನ್ನು ಶ್ರೀಮಠದ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಪ್ರದರ್ಶಿಸಿದರು.

## ಕಾಯಕ ಕಮ್ಮಟ

ಶ್ರೀ ಕ್ಷೇತ್ರದ ಪ್ರತಿ ವಿದ್ಯಾರ್ಥಿಯೂ ವಾರಕ್ಕೆರಡು ದಿವಸಗಳು ಸಾಯಂಕಾಲ ವಿವಿಧ ಕೆಲಸ ಕಾರ್ಯಗಳಲ್ಲಿ ತೊಡಗುವುದು ಸಂಸ್ಥೆಯ ನಿಯಮ. ಗಿಡಗಳಿಗೆ ನೀರು ಹಾಕುವುದು, ಶ್ರೀಕ್ಷೇತ್ರದ ಆವರಣವನ್ನು ಸ್ವಚ್ಛಗೊಳಿಸುವುದು, ಕಟ್ಟಡ ನಿರ್ಮಾಣಕ್ಕೆ ಬೇಕಾದ ಕಲ್ಲು, ಮಣ್ಣು ಸಾಗಿಸುವುದು, ಸುಗ್ಗಿಯ ಕಾಲದಲ್ಲಿ ಬೆಳೆ ಕಟಾವು ಮಾಡುವುದು, ಒಕ್ಕಣೆ ಮಾಡುವುದು ಇತ್ಯಾದಿ ಕೆಲಸಗಳಲ್ಲಿ ತೊಡಗುವಂತೆ ಮಾಡುವುದರ ಮೂಲಕ ಕಾಯಕ ಸಿದ್ಧಾಂತವನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಪೂಜ್ಯ ಶ್ರೀಗಳವರಾದಿಯಾಗಿ ಅಧ್ಯಾಪಕರೂ, ಸಿಬ್ಬಂದಿ ವರ್ಗದವರೂ ಈ ಕಾಯಕದಲ್ಲಿ ಭಾಗವಹಿಸುತ್ತಾರೆ.

# ಸಂಯುಕ್ತ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ಸಮಾರಂಭ




ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಡಾ. ಟಿ.ಸಿ. ಪೂರ್ಣಿಮಾ, ಶ್ರೀ ಜನಾರ್ಧನ, ಶ್ರೀ ಮಣಿವಣ್ಣನ್ ಹಾಗೂ ಶ್ರೀ ಸಿ.ಸಿ. ಹಿರೇಮಠ ಅವರಿದ್ದಾರೆ.

ಜನವರಿ ೩೦, ೨೦೦೧ನೇ ಗುರುವಾರ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಸಂಯುಕ್ತ ವಿದ್ಯಾರ್ಥಿಸಂಘದ ವಾರ್ಷಿಕೋತ್ಸವ ಸಮಾರಂಭದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಅವರು ತಮ್ಮ ಅನುಗ್ರ ನುಡಿಗಳಲ್ಲಿ "ವಿದ್ಯೆ ಜೊತೆಗೆ *ಉತ್ತಮ ಗುಣಗಳು ಬೆಳೆಯಬೇಕು. ಸಂಕಲ್ಪ ಶಕ್ತಿಬೇಕು, ಸಾಧಿಸುವ ಗುರಿಬೇಕು ಮಕ್ಕಳು ಪಾಂಡಿತ್ಯವುಳ್ಳವರಾಗಬೇಕು, ಜ್ಞಾನಶಕ್ತಿ ಬೆಳೆಸಿ ಕೊಳ್ಳಬೇಕು, ಪರಿಪೂರ್ಣಮಾನವಾಗಬೇಕು*" ಎಂದು ತಿಳಿಸಿದರು.

ಮುಖ್ಯಮಂತ್ರಿಗಳ ಸಚಿವಾಲಯದ ವಿಶೇಷ ಅಧಿಕಾರಿಗಳಾದ ಡಾ || ಟಿ.ಸಿ. ಪೂರ್ಣಿಮಾ ಅವರು ಸಮಾರೋಪ ಭಾಷಣ ಮಾಡುತ್ತಾ "ನೀವು ಭಸ್ಮ ಹಾಗೂ ಪ್ರಾರ್ಥನಾ ಸಮವಸ್ತ್ರಧರಿಸಿ ಕುಳಿತಿರುವುದನ್ನು ನೋಡಿದಾಗ ಭಾರತೀಯ ಸಂಸ್ಕೃತಿಯೇ ನನ್ನ ಕಣ್ಣುಮುಂದೆ ಭಾಸವಾದಂತೆ ಕಾಣುತ್ತದೆ. ನಿಮ್ಮ ಮುಖದಲ್ಲಿರುವ ದಿವ್ಯತೇಜಸ್ಸು, ನೋಡಿ ಸಂತೋಷವಾಗುತ್ತಿದೆ. ಜವಾಬ್ದಾರಿಯುಳ್ಳ ಪ್ರಜೆಗಳಾಗಿ ಶ್ರೀಗಳವರ ಆದರ್ಶ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಿ", ಎಂದು ಕರೆನೀಡಿದರು.

ತುಮಕೂರು ಹೇಮಾವತಿ ನಾಲಾವಿಭಾಗ ಮುಖ್ಯ ಅಭಿಯಂತರರಾದ ಶ್ರೀ ಜನಾರ್ಧನ ಅವರು ಬಹುಮಾನ ವಿತರಣೆ ಮಾಡಿ ಮಾತನಾಡುತ್ತಾ "ಮಕ್ಕಳು ಕೇವಲ ಪುಸ್ತಕದ ಹುಳುಗಳಾಗಬಾರದು, ತಮ್ಮ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಯಾಗಬೇಕು" ಎಂದು ನುಡಿದರು.

ಶ್ರೀ ಸಿ.ಸಿ. ಹಿರೇಮಠ ಅವರು ಮಾತನಾಡಿ ಈ ಸಮಾರಂಭ ನಿಮಗೆ ಸ್ನೇಹಮೇಳವಾಗಿದೆ ಸಂಸ್ಕಾರ ಬೆಳೆಸಿಕೊಳ್ಳಲು ಮಕ್ಕಳಿಗೆ ಪೋಷಕರು ಒಳ್ಳೆಯ ಅವಕಾಶ ಕಲ್ಪಿಸಿಕೊಡಬೇಕು. ಕೀರ್ತಿಶಾಲಿಗಳಾಗಿ ಬೆಳಗಬೇಕು ಎಂದು ಕರೆನೀಡಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ತುಮಕೂರು ಉಪವಿಭಾಗದ ಉಪವಿಭಾಗಾಧಿಕಾರಿಗಳಾದ ಶ್ರೀ ಮಣಿವಣ್ಣನ್ ಅವರು "ಉತ್ತಮ ಪರಿಸರದಲ್ಲಿ ಬೆಳೆಯುತ್ತಿರುವ ನೀವೇ ಧನ್ಯರು. ಪೂಜ್ಯರ ಆದರ್ಶ ವ್ಯಕ್ತಿತ್ವವನ್ನು ನಿಮ್ಮ ನಡೆನುಡಿಗಳಲ್ಲಿ ಅಳವಡಿಸಿಕೊಳ್ಳಿ. ಮಾತು ಮಿತವಾಗಿರಲಿ, ಕರ್ತವ್ಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಿ ಎಂದು ತಿಳಿಸಿದರು.

ಪ್ರಾರಂಭದಲ್ಲಿ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆ ನಡೆಯಿತು. ಮುಖ್ಯ ಶಿಕ್ಷಕರಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸ್ವಾಗತಿಸಿದರು. ವಿದ್ಯಾರ್ಥಿಸಂಘದ ವಾರ್ಷಿಕ ವರದಿಯನ್ನು ಶ್ರೀ ಕೆ.ಬಿ. ಶಿವಶಂಕರಯ್ಯನವರು ವಾಚಿಸಿದರು. ಮತ್ತೊರ್ವ ಮುಖ್ಯಶಿಕ್ಷಕರಾದ ಶ್ರೀ ಜಿ.ಹೆಚ್. ಗಂಗಾಧರಯ್ಯನವರು ವಂದನೆ ಸಲ್ಲಿಸಿದರು. ಶ್ರೀ ಜಿ.ಕೆ. ಕುಮಾರಸ್ವಾಮಿ ಕಾರ್ಯಕ್ರಮವನ್ನು ನಿರೂಪಿಸಿದರು.

ವರದಿ : ಕೆ.ಬಿ. ಶಿವಶಂಕರಯ್ಯ





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೫೩. | ಶ್ರೀ ಬಸವರಾಜ್, ಸಿ. ಗೌರಮ್ಮ<br>ಕಾಮಾಕ್ಷಿಪಾಳ್ಯ<br>ಬೆಂಗಳೂರು – ೫೬೦ ೦೭೯. | ೧,೩೦೦.೦೦<br>(೧ನೇ ಕಂತು) |
| ೫೫೪. | ಶ್ರೀ ಶಿವರುದ್ರಯ್ಯ – ಶಿವಪಾರ್ವತಮ್ಮ<br>ಇಸುವನಕೆರೆ<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೦.೦೦<br>(೧ನೇ ಕಂತು) |
| ೫೫೫. | ಶ್ರೀ ಕೆ.ಜಿ. ರಂಗಯ್ಯ<br>ಕೆಂಕೆರೆಪೋಸ್ಟ್<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೫೦೧.೦೦<br>(೨ನೇ ಕಂತು) |
| ೫೫೬. | ಶ್ರೀಮತಿ ಐ.ವಿ. ಸರಸ್ವತಿ ಮತ್ತು ಮಕ್ಕಳು<br>ಕೊಂ. ಲಿಂ.ಐ.ಎಂ. ವಿಶ್ವನಾಥ<br>ಐಗೂರು ಎಸ್ಟೇಟ್<br>ಹಾಸನ ಜಿಲ್ಲೆ. | ೧,೦೦೧.೦೦<br>(೨ನೇ ಕಂತು) |
| ೫೫೭. | ಶ್ರೀ ಡಿ. ಪ್ರಭುಸ್ವಾಮಿ<br>ಅಮರಜ್ಯೋತಿನಗರ<br>ಬೆಂಗಳೂರು–೪೦. | ೨,೦೦೧.೦೦ |
| ೫೫೮. | ಪ್ರಾಂಶುಪಾಲರು ಮತ್ತು ಭಾಷಾ ಉಪನ್ಯಾಸಕರು<br>ಶ್ರೀ ವಿನಾಯಕ ಪದವಿಪೂರ್ವ ಕಾಲೇಜು<br>ನಿಟ್ಟೂರು, ತುಮಕೂರು ಜಿಲ್ಲೆ. | ೫,೦೦೦.೦೦ |
| ೫೫೯. | ಶ್ರೀ ಹೆಚ್.ಜಿ. ಸೋಮನಾಥ್ ಬಿನ್<br>ಶ್ರೀ ಹೆಚ್. ಗುಬ್ಬಣ್ಣ<br>ದೊಡ್ಡಬಳ್ಳಾಪುರ<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೫,೦೦೧.೦೦ |
| ೫೬೦. | ಶ್ರೀ ಬಿ.ಎಂ. ಈಶ್ವರಯ್ಯ ಮತ್ತು ಕುಟುಂಬ<br>ಬಿಟ್ಟಸಂದ್ರ<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೫೬೧. | ಶ್ರೀ ಬಿ. ಬಸವರಾಜು<br>ಮೈಕೋ ಬಡಾವಣೆ<br>ಬೆಂಗಳೂರು – ೫೬೦ ೦೭೬. | ೫೦೦.೦೦<br>(೨ನೇ ಕಂತು) |
| ೫೬೨. | ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು<br>ತುಮಕೂರು – ೫೭೨೧೦೨. | ೨,೦೦೧.೦೦<br>(೬ನೇ ಕಂತು) |
| ೫೬೩. | ಶ್ರೀ ಎನ್.ಬಿ. ಜಗದೀಶ್ ಮತ್ತು ಸಹೋದರರು<br>ನಾರ್ವೆ ಗ್ರಾಮ, ಬೇಲೂರು ತಾಲ್ಲೂಕು | ೨,೦೦೧.೦೦ |
| ೫೬೪. | ಶ್ರೀ ಎನ್.ಎಂ. ಜಗದೀಶ್ ಬಿನ್<br>ಎನ್.ಎಂ. ಮಹಂತೇ ಗೌಡ<br>ನಾರ್ವೆ ಗ್ರಾಮ<br>ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ. | ೨,೦೫೦.೦೦ |
| ೫೬೫. | ಶ್ರೀ ಎನ್.ಬಿ. ಶಿವಕುಮಾರ್ ಬಿನ್<br>ಬಸಪ್ಪಗೌಡ<br>ನಾರ್ವೆ ಗ್ರಾಮ<br>ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ. | ೨,೧೦೧.೦೦ |
| ೫೬೬. | ಸರ್ವಭೂಷಣಸ್ವಾಮಿ<br>೯ನೇ ಬ್ಲಾಕ್, ಜಯನಗರ<br>ಬೆಂಗಳೂರು – ೫೬೦ ೦೭೯. | ೧೨,೦೦೦.೦೦<br>(೨ನೇ ಕಂತು) |
| ೫೬೭. | ಶ್ರೀ ಎನ್.ಪಿ. ಮಂಜುನಾಥ್ ಬಿನ್<br>ಬಿ. ಚನ್ನಪ್ಪಗೌಡ<br>ಸಕಲೇಶಪುರ, ಹಾಸನ ಜಿಲ್ಲೆ. | ೨,೦೦೧.೦೦ |
| ೫೬೮. | ಶ್ರೀ ಜಿ.ಎನ್. ಭಾನುಪ್ರಕಾಶ್<br>ಎಸ್.ಐ.ಟಿ. ತುಮಕೂರು. | ೩,೦೦೦.೦೦ |
| ೫೬೯. | ಡಾ. ಸದಾನಂದ<br>ನಂದಿ ಬಡಾವಣೆ<br>ಬೆಂಗಳೂರು – ೫೬೦೦೯೬. | ೧,೦೦,೦೦೫.೦೦ |
| ೫೭೦. | ನಾಗೂರ್ ಮಿರಾನ್<br>ವಿಜಯನಗರ<br>ಬೆಂಗಳೂರು – ೫೬೦ ೦೪೦. | ೨,೧೦೧.೦೦ |
| ೫೭೧. | ಲಾವಣ್ಯ ಕೃಪಾಶಂಕರ್<br>ಜಯನಗರ<br>ಬೆಂಗಳೂರು – ೫೬೦.೦೧೧. | ೨,೧೧೧.೦೦ |
| ೫೭೨. | ಗ್ರಾಮಸ್ಥರು<br>ಬೊಮ್ಮನಕೆರೆ ಮತ್ತು ಹರಗರಹಳ್ಳಿ<br>ಸಕಲೇಶಪುರ ತಾ ||, ಹಾಸನ ಜಿಲ್ಲೆ. | ೪,೫೦೦.೦೦ |
| ೫೭೩. | ಶ್ರೀ ಕೆ. ನಂಜುಂಡಪ್ಪ<br>ಕೆಂಗೇರಿ ಉಪನಗರ, ೨ನೇ ಹಂತ<br>ಬೆಂಗಳೂರು – ೫೬೦ ೦೬೦. | ೫೦೧.೦೦<br>(೨ನೇ ಕಂತು) |

(ಮುಂದುವರಿಯುತ್ತದೆ)

## ಶ್ರೀಮಠದಲ್ಲಿ ಗಣರಾಜ್ಯೋತ್ಸವ




ಜನವರಿ ೨೬ರಂದು ಶ್ರೀಮಠದಲ್ಲಿ ನಡೆದ ಗಣರಾಜ್ಯೋತ್ಸವ ದಿನಾಚರಣೆ ಸಮಾರಂಭದಲ್ಲಿ ಕೃಷಿ ಸಚಿವ ಶ್ರೀ ಟಿ.ಬಿ. ಜಯಚಂದ್ರ ಅವರು ಭಾಷಣ ಮಾಡುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ಸಿ.ಎನ್. ಏಕೇಶ್ವರ, ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಲೋಕಸಭಾ ಸದಸ್ಯ ಶ್ರೀ ಜಿ.ಎಸ್. ಬಸವರಾಜ್ ಹಾಗೂ ಶ್ರೀ ಕೆ.ಹೆಚ್. ಶಿವರುದ್ರಯ್ಯ ಅವರು ಉಪಸ್ಥಿತರಿದ್ದರು.

## ತುಮಕೂರಿನಲ್ಲಿ ಹೊಯ್ಸಳ ಯುವ ವೇದಿಕೆಯ ಉದ್ಘಾಟನೆ



ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ತುಮಕೂರಿನಲ್ಲಿ ಹೊಯ್ಸಳ ಯುವ ವೇದಿಕೆಯ ಉದ್ಘಾಟನೆ. ಚಿತ್ರದಲ್ಲಿ : ಶ್ರೀ ಸೋಮಣ್ಣ, ಶ್ರೀ ಶಫೀ ಅಹಮ್ಮದ್, ಶ್ರೀ ರೆಡ್ಡಿ ಚಿನ್ನ ಯಲ್ಲಪ್ಪ, ಶ್ರೀ ಕೆ.ಎನ್. ರಾಜಣ್ಣ, ಶ್ರೀ ಜೋಸೆಫ್ ಸ್ಟಾರಿನ್, ಶ್ರೀ ಸಿ.ಆರ್. ಸುಧಾಕರ್ ಲಾಲ್ ಹಾಗೂ ಶ್ರೀ ಎಸ್.ಜಿ. ಗಂಗಾಧರ್ ಅವರಿದ್ದಾರೆ.




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಹಿರೇಮಠದ ಡಾ. ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳವರಿಂದ ತುಮಕೂರು ಪಟ್ಟಣ ಸಹಕಾರ ಬ್ಯಾಂಕಿನ ನೂತನ ಕಟ್ಟಡ ಶಿಲಾನ್ಯಾಸ ಸಮಾರಂಭದ ಉದ್ಘಾಟನೆ




'ಮುನ್ನುಡಿ' ಚಲನಚಿತ್ರದ ನಿರ್ಮಾಪಕರು, ಶ್ರೀ ಸಿದ್ಧಗಂಗಾ ವಿಜ್ಞಾನ ಮತ್ತು ಕಲಾ ಕಾಲೇಜಿನ ದೈಹಿಕ ಶಿಕ್ಷಣ ನಿರ್ದೇಶಕರೂ ಆದ ಶ್ರೀ ಜಿ.ಎಸ್. ಸೋಮಶೇಖರ್ (ಸೋಮಣ್ಣ) ಅವರು 'ಚಲನಚಿತ್ರ ರಾಷ್ಟ್ರೀಯ ಪ್ರಶಸ್ತಿ'ಯನ್ನು ರಾಷ್ಟ್ರಪತಿ ಶ್ರೀ ಕೆ.ಆರ್. ನಾರಾಯಣ್ ಅವರಿಂದ ಸ್ವೀಕರಿಸುತ್ತಿರುವುದು